

೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ-ಬೆಂಗಳೂರು

ಸಂಚಿಯ ಹೊನ್ನಮ್ಮ ವಿರಚಿತ

# ಹದಿಬದೆಯ ಧರ್ಮ

ಗದ್ಯಾನುವಾದ: ವಿದ್ವಾನ್ ಎನ್. ರಂಗನಾಥಶರ್ಮ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ ಬೆಂಗಳೂರು-೫೬೦೦೧೮

೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಬೆಂಗಳೂರು

ಸಂಚಿಯ ಹೊನ್ನಮ್ಮ ವಿರಚಿತ

# ಹದಿಬದೆಯ ಧರ್ಮ

ಗದ್ಯಾನುವಾದ

ವಿದ್ವಾನ್ ಎನ್. ರಂಗನಾಥ ಶರ್ಮ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು – ೫೬೦೦೧೮

**HADIBADEYA DHARMA** - BY SANCHIYA HONNAMMA
Original with prose rendering by Vidwan N. Ranganatha Sharma
Published by · **Kannada Sahitya Parishat**
Pampa Mahakavi Road, Chamarajapet, Bangalore - 560018
Pages : xi + 141 Price . **Rs. 60=00** , **2011**

ಮುದ್ರಣದ ವರ್ಷ : ೨೦೧೧
ಪ್ರತಿಗಳು : ೧೦೦೦
ಬೆಲೆ : ಅರವತ್ತು ರೂಪಾಯಿಗಳು





ಮುಖಪುಟ ವಿನ್ಯಾಸ : ಶ್ರೀ ಎನ್. ಅವಿನಾಶ್

ಮುದ್ರಣ . ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸಿದ ಮೇಲೆ ಅವುಗಳ ಮಾರಾಟದ ಪ್ರಮಾಣ ಹೆಚ್ಚುತ್ತಿರುವುದನ್ನು ಕಂಡು ನನಗೆ ಮಹದಾನಂದವಾಗಿದೆ. ಓದುಗರು ಬಯಸುವ ಪುಸ್ತಕಗಳನ್ನು ಅವರ ಕೈಗೆ ತಲುಪುವಂತೆ ಮಾಡುವುದೇ ಪುಸ್ತಕೋದ್ಯಮದ ಪ್ರಾಥಮಿಕ ಆಶಯ. ಈ ಉದ್ಯಮವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ, ಕಾಲಕಾಲಕ್ಕೆ ಬದಲಾಗುತ್ತಿರುವ ಓದುಗರ ಅಭಿರುಚಿಗೆ ಸ್ಪಂದಿಸುತ್ತ, ಆ ಕ್ಷೇತ್ರದಲ್ಲಿ ಬಹು ವೇಗವಾಗಿ ಸಾಗುತ್ತಿರುವ ಪ್ರಕಾಶಕರ ನಡುವೆ ಕನ್ನಡ ಸರಸ್ವತಿಯ ಆರಾಧನೆ ಮಾಡುತ್ತಿದ್ದೇನೆಂದು ಭಾವಿಸಿ ಕನ್ನಡ ಸಾಹಿತ್ಯ ಪರಿಷತ್ತು ತಣ್ಣಗೆ, ನಿರುಮ್ಮಳವಾಗಿ ಇರುವ ಕಾಲ ಮುಗಿದುಹೋಯಿತು. ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿ ಬದಲಾಗುವುದರಲ್ಲೇ ಸಾಹಿತ್ಯ ಪರಿಷತ್ತಿನ ಜೀವಂತಿಕೆಯಿದೆಯೆಂದು ಬಲವಾಗಿ ನಂಬಿ ನಡೆಯುತ್ತಿರುವವನು ನಾನು. ಕನ್ನಡದಲ್ಲಿ ಇತ್ತೀಚೆಗೆ ಬರುತ್ತಿರುವ ವೈವಿಧ್ಯಮಯ ಪುಸ್ತಕಗಳನ್ನು ನೋಡಿದರೆ ಮೊದಲು ಅವುಗಳನ್ನು ಕಣ್ಣಿಗೊತ್ತಿಕೊಂಡು, ಮೃದುವಾಗಿ ಮೈದಡವಿ, ಸ್ವಲ್ಪ ಹತ್ತಿರದಿಂದಲೂ ನಂತರ ದೂರದಿಂದಲೂ ನೋಡಿ ಪುಳಕಗೊಂಡು ಪುಟ ತಿರುವಬೇಕೆನ್ನಿಸುತ್ತದೆ. ಪಂಚೇಂದ್ರಿಯಗಳಲ್ಲಿ ನಾಲಗೆಯೊಂದನ್ನು ಹೊರತುಪಡಿಸಿ ಉಳಿದವುಗಳೆಲ್ಲ ತಣಿಯದ ದಿವ್ಯಸುಖವನ್ನು ಖಂಡಿತ ಅನುಭವಿಸುತ್ತವೆ. ಪುಸ್ತಕಪ್ರೇಮಿಗಳು ಯಾರೂ ಈ ಭವಸುಖನಿಮಜ್ಜನದಿಂದ ಬಿಡಿಸಿಕೊಳ್ಳಲಾರರು.

ಲೇಖಕ–ಮಾರಾಟಗಾರ–ಓದುಗರಿಗೆ ವಿಭಿನ್ನ ರೀತಿಯ ಸುಖವುಣ್ಣಿಸುವ ಪೈಪೋಟಿಯಲ್ಲಿ ಪುಸ್ತಕೋದ್ಯಮ ಮುಳುಗಿಹೋಗಿರುವಾಗ ಪರಿಷತ್ತು ತಟಸ್ಥ ತಲ್ಲೀನತೆಯಲ್ಲಿರುವುದು ಸಾಧ್ಯವೇ ಇಲ್ಲ. ಗತವೈಭವದ ಸಾಕ್ಷಿಯಾಗಿ ಉಳಿದಿರುವ, ಆದರೆ ಇವತ್ತಿನ ಅಭಿರುಚಿಗೆ ಸಲ್ಲದಂಥ ಮುಖಪುಟ, ವರ್ಣಸಂಯೋಜನೆ, ಚಿತ್ರ ವಿನ್ಯಾಸ, ಒಳಗಿನ ಕಾಗದಗಳನ್ನು ಸಂಪೂರ್ಣ ಬದಲಾಯಿಸಿ ಚಂದಗಾಣಿಸಿದರೆ ಮಾತ್ರ ಓದುಗರು ಹತ್ತಿರ ಬರುತ್ತಾರೆ ಕೈಯಿಂದ ಎತ್ತಿ ನೋಡುತ್ತಾರೆ, ಕೊಳ್ಳುವ ಮನಸ್ಸು ಮಾಡುತ್ತಾರೆ, ಮನೆಯ ಕಪಾಟುಗಳನ್ನು ಪುಸ್ತಕಗಳಿಂದ ಅಲಂಕರಿಸುತ್ತಾರೆ. ಪುಸ್ತಕವೊಂದರ ಪುಟ ಪುಟಗಳಲ್ಲಿ ಪ್ರತಿಭೆ–ಪಾಂಡಿತ್ಯಗಳ ವಿದ್ಯುತ್ ಪ್ರವಾಹ ಹರಿದು ಓದುಗರನ್ನು ರಸರೋಮಾಂಚನಗೊಳಿಸುವುದು ಎಷ್ಟು ಮುಖ್ಯವೋ ನಮಗೆ ಬೇಕಾದ್ದು ಅದರಲ್ಲೇನೋ ಇದೆ ಎನ್ನುವ ಸೂಚನೆ ಪುಸ್ತಕದತ್ತ ನೋಟ ಹಾಯಿಸುತ್ತಿದ್ದಂತೆ ಸಿಗುವುದೂ ಅಷ್ಟೇ ಮುಖ್ಯ. ಆಧುನಿಕ ಮುದ್ರಣ ತಂತ್ರಜ್ಞಾನದ ಸಾಧ್ಯತೆಗಳನ್ನು ಸಮರ್ಪಕವಾಗಿ ಅಳವಡಿಸಿಕೊಳ್ಳುವುದರಿಂದಲೂ ಯಶಸ್ಸಿನ ಹೆದ್ದಾರಿ ನಿರ್ಮಾಣವಾಗುತ್ತದೆಂಬ ಮಾತೂ ಸತ್ಯವೇ. ಇಷ್ಟೆಲ್ಲಾ ಚಿಂತನ–ಮಂಥನ, ಪರೀಕ್ಷೆ–ಪ್ರಯೋಗ, ಅವಲೋಕನ–ಪರಾಮರ್ಶನಗಳ ಪರಿಣಾಮವಾಗಿಯೇ ವರ್ತಮಾನದ ಪುಸ್ತಕ ಪ್ರಕಟಣೆಯ ತುರುಸಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಆತ್ಮವಿಶ್ವಾಸದ ಮತ್ತು ಹೆಮ್ಮೆಯ ಹೆಜ್ಜೆಗಳನ್ನು ಇಡಲು ಸಾಧ್ಯವಾಗಿದೆ. ಬೆಂಗಳೂರು ಮತ್ತು ಹೊರಗೆ ನಡೆಯುತ್ತಿರುವ ಪುಸ್ತಕ ಮೇಳ–ಪುಸ್ತಕ ಪ್ರದರ್ಶನಗಳಲ್ಲಿ ಜಯಭೇರಿ ಬಾರಿಸಲು ಸಾಧ್ಯವಾಗಿದೆ. ೨೦೧೦ರ ಕನ್ನಡ ರಾಜ್ಯೋತ್ಸವದ ನೆನಪಿಗೆ ಏರ್ಪಡಿಸಿದ್ದ ಪುಸ್ತಕ ಪ್ರದರ್ಶನ ಮತ್ತು ಮಾರಾಟದಲ್ಲಿ ದಾಖಲೆಯ ವಹಿವಾಟು ನಡೆಸಲು ಸಾಧ್ಯವಾಗಿದೆ. ವಿವಿಧ ಪ್ರಕಾರದ ಪುಸ್ತಕಗಳಿಗೆ ರಿಯಾಯಿತಿ ನೀಡಿದ್ದರ ಪರಿಣಾಮವಾಗಿ ಒಟ್ಟು ೧೦ ಲಕ್ಷ ರೂಪಾಯಿ ಮೌಲ್ಯದ ವಹಿವಾಟು ನಡೆದಿರುವುದು ಪರಿಷತ್ತಿನ ಪುಸ್ತಕಗಳ ಮಾರಾಟ ಇತಿಹಾಸದಲ್ಲಿ ಸಾರ್ವಕಾಲಿಕ ದಾಖಲೆಯಾಗಿದೆ. ಬಹುಕಾಲದ ನಂತರ ಮರುಮುದ್ರಣಗೊಂಡ ಬೃಹತ್ ಕನ್ನಡ – ಕನ್ನಡ ನಿಘಂಟಿನ ಎಂಟು ಸಂಪುಟಗಳ ಮಾರಾಟವೂ ರಭಸವಾಗಿ ನಡೆಯುತ್ತಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಮತ್ತು ತಾಲ್ಲೂಕು ಘಟಕಗಳು ಸಮ್ಮೇಳನಗಳ ಸಂದರ್ಭದಲ್ಲಿ ಭರವಸೆಯಿಂದ ಪುಸ್ತಕಗಳನ್ನು ಹೊರತರಲು ಸಾಧ್ಯವಾಗಿದೆ. ಇದನ್ನೆಲ್ಲ ಸಾಧ್ಯವಾಗಿಸುವುದಕ್ಕೆ ಕಾರಣರಾದ ಕನ್ನಡ ಪುಸ್ತಕಪ್ರೇಮಿಗಳನ್ನು ಅಭಿನಂದಿಸಬೇಕಾಗಿದೆ.

೨೦೧೧ ಫೆಬ್ರವರಿ ೪ ರಿಂದ ೬ ರವರೆಗೆ ಮೂರು ದಿನಗಳ ಕಾಲ ಬೆಂಗಳೂರಿನಲ್ಲಿ ನಡೆಯಲಿರುವ ೭೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿಗಾಗಿ ಹಲವು ಮೌಲಿಕ ಕೃತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿದೆ. ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಒಳಗೊಳ್ಳಲಿರುವ ಈ ಪುಸ್ತಕಗಳ ಆಯ್ಕೆಗೆ ಅವುಗಳ ಗುಣಮಟ್ಟವೇ ಮೂಲ ಬಂಡವಾಳವಾಗಿದೆ. ಪರಿಷತ್ತು ತಮ್ಮ ಒಂದು ಪುಸ್ತಕವನ್ನು ಪ್ರಕಟಿಸಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿ ನಾಡಿನ ಮೂಲೆಮೂಲೆಗಳಿಂದ ಲೇಖಕರು ಪತ್ರ ಬರೆದು ವಿನಂತಿ ಮಾಡಿಕೊಳ್ಳುತ್ತಾರೆ. ಅನೇಕರು ಹಸ್ತಪ್ರತಿಗಳನ್ನೇ ಕಳುಹಿಸಿಕೊಡುತ್ತಾರೆ. ಅಂಥ ಮನವಿಗಳು ವರ್ಷವೊಂದರಲ್ಲಿ ಸಾವಿರವನ್ನೂ ಮೀರುತ್ತವೆ. ಹಾಗೆ ಎಲ್ಲ ಪುಸ್ತಕಗಳನ್ನೂ ಮರುಮಾತಿಲ್ಲದೆ ಪ್ರಕಟಿಸುವುದು ಪರಿಷತ್ತಿಗೆ ಸಾಧ್ಯವೂ ಇಲ್ಲ, ಅದು ಸಾಧುವೂ ಅಲ್ಲ. ಪುಸ್ತಕದ ಶಕ್ತಿ–ಯೋಗ್ಯತೆಗಳನ್ನು ಜರಡಿಯಾಡಿ ಅಂತಿಮ ನಿರ್ಧಾರವನ್ನು ತೆಗೆದುಕೊಳ್ಳುವ ಪರಿಶೀಲನಾ ಸಮಿತಿಯ ಅಗ್ನಿದಿವ್ಯವನ್ನು ಎದುರಿಸಿಯೇ ಕೃತಿ ಪ್ರಕಟಗೊಳ್ಳಬೇಕಾಗುತ್ತದೆ. ಈ ಬಾರಿಯ ಅಕ್ಷರಜಾತ್ರೆಯನ್ನು ಅರ್ಥಪೂರ್ಣವಾಗಿ ಸಿಂಗರಿಸುವುದಕ್ಕಾಗಿಯೇ ಸಜ್ಜುಗೊಂಡಿರುವ ಈ ಪುಸ್ತಕಗಳು ಪ್ರೀತಿಸುವ ಸಹೃದಯರ ಮಡಿಲನ್ನು ಸೇರಲಿ, ಅವರ ಜ್ಞಾನಭಂಡಾರವನ್ನು ವಿಸ್ತರಿಸಲಿ, ಅವರನ್ನು ರಸಾನಂದದಲ್ಲಿ ಮುಳುಗಿಸಲಿ ಎಂದು ಹಾರೈಸುತ್ತೇನೆ. ಓದುಗರ ರಚನಾತ್ಮಕ ಸಲಹೆ ಮತ್ತು ಪ್ರತಿಕ್ರಿಯೆಗಳಿಗೆ ಸದಾ ಸ್ವಾಗತವಿದೆ.

**ಡಾ. ನಲ್ಲೂರು ಪ್ರಸಾದ್ ಆರ್.ಕೆ.**
**ಅಧ್ಯಕ್ಷರು**

# ಪರಿವಿಡಿ

# ಉಪೋದ್ಘಾತ

'ಹದಿಬದೆಯ ಧರ್ಮ' ಕನ್ನಡ ಸಾಹಿತ್ಯದಲ್ಲಿ ಒಂದು ಅಪೂರ್ವವಾದ ಗ್ರಂಥ. ಗ್ರಂಥವನ್ನು ಬರೆದವಳು ಸ್ತ್ರೀ, ಗ್ರಂಥ ಸ್ತ್ರೀಯರ ನಡವಳಿಕೆಗೆ ಸಂಬಂಧಿಸಿದ್ದು. ಅದರಲ್ಲೂ ವಿಶೇಷವಾಗಿ ಗೃಹಿಣಿಯಾದವಳು ಎಂದರೆ 'ಪತಿವ್ರತೆ' ಎನ್ನಿಸಿಕೊಳ್ಳುವ 'ಸ್ತ್ರೀ' ನಡೆದುಕೊಳ್ಳಬೇಕಾದ ವಿಧಾನವನ್ನು ಕುರಿತದ್ದು. ಇದು ಬರಿಯ ಕಾವ್ಯವಲ್ಲ, ಸ್ತ್ರೀಧರ್ಮಬೋಧಿನಿ. ಹಾಗೆಂದು 'ಸ್ತ್ರೀ'ಯ ಸಕಲ ಧರ್ಮದ ವಿವರಣೆ ಇದರಲ್ಲಿ ಬಂದಿದೆ ಎಂದಲ್ಲ, ಸಂಸಾರಿಯಾದ ಹೆಣ್ಣು ತನ್ನ ಪತಿಯ ಸಂಬಂಧದಲ್ಲಿ ವರ್ತಿಸುವ ಕ್ರಮದ ವರ್ಣನೆ ಈ ಗ್ರಂಥದಲ್ಲಿದೆ.

ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿಗೆ ಪೂಜ್ಯಸ್ಥಾನ ಕೊಟ್ಟಿರುವಂತೆ ಆಕೆಯ ಪಾತಿವ್ರತ್ಯಕ್ಕೆ ಹೆಚ್ಚಿನ ಮರ್ಯಾದೆಯನ್ನು ಕೊಟ್ಟಿದ್ದಾರೆ. ವಿವಾಹಿತಳಾದ ಸ್ತ್ರೀ ಸಮಾಜದಲ್ಲಿ ಪೂಜ್ಯಳು, ಗೌರವಾನ್ವಿತಳು. ಅವಳು ತನ್ನ ಪಾತಿವ್ರತ್ಯದಿಂದ ತನ್ನ ಪೂಜ್ಯಸ್ಥಾನವನ್ನು ಗಳಿಸಿಕೊಳ್ಳುತ್ತಾಳೆ. ಆಕೆ ಮನೆಯ ಯಜಮಾನಿ, ಗೃಹಿಣಿ. ಮಕ್ಕಳಿಗೆ ತಾಯಿಯಾಗಿ ಅವರನ್ನು ಪೋಷಿಸುವಂತೆ, ಗಂಡನಿಗೆ ಪ್ರಿಯಳಾಗಿ ಅವನನ್ನೂ ಪೋಷಿಸುತ್ತಾಳೆ. ಈ ಗಂಡ ಹೆಂಡಿರ ಸಂಬಂಧ ಹೇಗಿರಬೇಕು, ಒಬ್ಬರನ್ನು ಒಬ್ಬರು ಅರಿತು ಹೇಗೆ ನಡೆದುಕೊಳ್ಳಬೇಕು, ನಮ್ಮ ಧರ್ಮ ಈ ವಿಚಾರದಲ್ಲಿ ಏನು ಹೇಳುತ್ತದೆ- ಮೊದಲಾದ ಅಂಶಗಳನ್ನೂ, ಶಾಸ್ತ್ರೋಕ್ತ ಪ್ರಕಾರ ಹೊನ್ನಮ್ಮ ಸುಲಭವೂ ಸರಳವೂ ಆದ ಕನ್ನಡದಲ್ಲಿ, ಹೆಣ್ಣುಮಕ್ಕಳು ಪಾರಾಯಣ ಮಾಡಲು ಅನುಕೂಲವಾದ ಸಾಂಗತ್ಯದ ಧಾಟಿಯಲ್ಲಿ ಹೇಳಿದ್ದಾಳೆ.

ಇಂಥ ಒಂದು ವಿಶಿಷ್ಟ ಶಾಸ್ತ್ರ ಕಾವ್ಯರೂಪದ ಗ್ರಂಥವನ್ನು ರಚಿಸಿದ ಸಂಚಿಯ ಹೊನ್ನಮ್ಮ ೧೬೭೨ ರಿಂದ ೧೭೦೪ ರ ವರೆಗೆ ಆಳಿದ ಮೈಸೂರು ಅರಸರಾದ ಚಿಕ್ಕದೇವರಾಜರ ಕಾಲದಲ್ಲಿದ್ದಳು.

ಈಕೆ ಎಳಂದೂರಿನವಳು ; ರಾಜನ ಪಟ್ಟಮಹಿಷಿಯಾದ ದೇವರಾಜಮ್ಮಣ್ಣಿಯ ಪ್ರೀತಿಗೆ ಪಾತ್ರಳಾದವಳಾಗಿ ಅವಳೊಡನೆ ಅರಮನೆಯನ್ನು ಸೇರಿದಂತೆ ಕಾಣಿಸುತ್ತದೆ. ಅಲ್ಲಿ ರಾಜರ ಸಂಚಿಯ ಊಳಿಗದವಳಾಗಿದ್ದುಕೊಂಡು, ಅರಮನೆಯ ವಿದ್ವತ್ ಸಭೆಯ ಸಂಪರ್ಕದಿಂದ ವಿದ್ಯಾವಂತಳಾದಳು. ಅವಳಲ್ಲಿ ಜನ್ಮತಃ ಹುದುಗಿದ್ದ ಪ್ರತಿಭೆಯು, ಕಲಿತ ವಿದ್ಯೆಯಿಂದ, ಸತತ ಅಭ್ಯಾಸದಿಂದ ಪ್ರಕಾಶಗೊಂಡಿತು. ಅವಳ ನಡೆಯಲ್ಲಿ ನುಡಿಯಲ್ಲಿ ಕಂಡ ಜಾಣ್ಮೆಯನ್ನು ಮೆಚ್ಚಿಕೊಂಡ ರಾಜರು 'ಅವಳು ಏಕೆ ಕಾವ್ಯವೊಂದನ್ನು ರಚಿಸಬಾರದು' ಎಂದು ಮಹಾರಾಣಿಯವರಾದ ದೇವರಾಜಮ್ಮಣ್ಣಿಯವರಿಗೆ ಸೂಚಿಸಿದರು. ಆಕೆ ತನ್ನ ಸಖಿಯೂ ಊಳಿಗದವಳೂ ಆದ ಹೊನ್ನಮ್ಮನಿಗೆ ರಾಜರ

ಅಭಿಲಾಷೆಯನ್ನು ತಿಳಿಸಿದರು. ರಾಜರ ಆಸೆ ಮತ್ತು ಒಡತಿಯ ಆಣತಿಗನುಸಾರವಾಗಿ ಹೊನ್ನಮ್ಮ ಈ 'ಹದಿಬದೆಯ ಧರ್ಮ'ವನ್ನು ರಚಿಸಿದಳು.

ಹೊನ್ನಮ್ಮನ ವಿದ್ಯಾಗುರು ವೇದಮಾರ್ಗಪ್ರತಿಷ್ಠಾಪನಾಚಾರ್ಯ ಉಭಯ ವೇದಾಂತಾಚಾರ್ಯ ಅಳಸಿಂಗರಾರ್ಯ. ಈತ ಚಿಕ್ಕದೇವರಾಜನ ಮಂತ್ರಿಯಾಗಿದ್ದ ತಿರುಮಲಾರ್ಯನ ತಮ್ಮ, ಕನ್ನಡದ ಮೊದಲ ನಾಟಕವೆಂದು ಹೆಸರಿಸುವ 'ಮಿತ್ರಾವಿಂದ ಗೋವಿಂದ' ನಾಟಕದ ಕರ್ತೃ. ಗುರುವಿಗೆ ಶಿಷ್ಯಳ ಮೇಲೆ ತುಂಬ ವಾತ್ಸಲ್ಯ ಮತ್ತು ಆಕೆಯನ್ನು ಕುರಿತು ಹೆಮ್ಮೆ. ಅವಳನ್ನು 'ಸರಸಸಾಹಿತ್ಯದ ವರದೇವತೆ, ಕಾವ್ಯಾಲಂಕಾರ ನಾಟಕಗಳ ಪವಣೆಗೆಯ ಬಲ್ಲವಳು' ಎಂದು ರಾಜರ ಮುಂದೆ ಹೊಗಳಿದನಂತೆ. ಗುರುವಿನಿಂದ ಹೊಗಳಿಸಿಕೊಳ್ಳಬೇಕಾದರೆ ಹೊನ್ನಮ್ಮ ಎಷ್ಟು ಬುದ್ಧಿವಂತಳಾಗಿದ್ದಳು ಎಂಬುದನ್ನು ಊಹಿಸಿಕೊಳ್ಳಬಹುದು.

ಹೊನ್ನಮ್ಮನಿಗೆ ರಾಜರಾಣಿಯರ ಮೇಲೆ ತುಂಬ ಭಕ್ತಿ, ಗೌರವ ; ಗುರುಗಳಲ್ಲಿ ಶ್ರದ್ಧಾಪೂರ್ವಕ ಭಕ್ತಿ. ಈಕೆ ರಾಜದಂಪತಿಗಳ 'ಪಾದದೂಳಿಗದೊಳು' ಬಳೆದ ಬಾಲಕಿ. ಅರಸರ ಸಂಚಿಯ ಸೇವಕಳು. ಅಳಸಿಂಗರಾರ್ಯನಲ್ಲಿ ಕನ್ನಡ, ಸಂಸ್ಕೃತವನ್ನು ಅಭ್ಯಾಸ ಮಾಡಿ ಸಾಹಿತ್ಯಾಲಂಕೃತಳಾದಳು. 'ಹದಿಬದೆಯ ಧರ್ಮ'ವನ್ನು ಬರೆಯಲು ತಾನು ಓದಿದ ಕಾವ್ಯಶಾಸ್ತ್ರಗಳ ಪಟ್ಟಿಯನ್ನೇ ತಿಳಿಸಿದ್ದಾಳೆ. ಆದ್ದರಿಂದ ಅವಳ ಅಭ್ಯಾಸದ ವ್ಯಾಪ್ತಿ ಎಷ್ಟೆಂದು ಗುರುತಿಸಬಹುದು. ಅವಳನ್ನು 'ಸರಸಸಾಹಿತ್ಯದ ವರದೇವತೆ' ಎಂದು ಗುರುವೇ ಹೊಗಳುತ್ತಾನೆ. 'ಕಾವ್ಯಾಲಂಕಾರ ನಾಟಕಗಳ ಪವಣೆಗೆಯಿರುವ ಬಲ್ಲವಳಾ'ದ ಇವಳಿಂದ 'ಕವಿತೆಯೊಂದನ್ನು ಹೇಳಿಸು' ಎಂದು ರಾಜರು ಅಪ್ಪಣೆ ಮಾಡಿದಾಗ, ದೇವಾಜಮ್ಮಣ್ಣಿ 'ಕಲಿತ ಬಿಜ್ಜೆಯ ಬಲ್ಲವರಿಗೆ ತಿಳಿಪುದ್ಸೆಸೆ ಫಲ' ಎಂದು ಹೇಳಿ ಹೊನ್ನಮ್ಮ ಕಾವ್ಯವೊಂದನ್ನು ಬರೆಯುವಂತೆ ಪ್ರೇರೇಪಿಸುತ್ತಾಳೆ. ಅನುಗೃಹೀತಳಾದ ಸಂಚಿಯ ಹೊನ್ನಮ್ಮ ತನ್ನ ಕೃತಜ್ಞತೆಯನ್ನು ರಾಜದಂಪತಿಗಳಿಗೆ 'ಹದಿಬದೆಯ ಧರ್ಮ'ದ ಮೂಲಕ ಅರ್ಪಿಸುತ್ತಾಳೆ.

ಹೊನ್ನಮ್ಮ 'ಪವಣೆಗೆಯೊಪ್ಪ ಪುರುಳು ಪೊಗರೇರೆ ಅಂಗವಿಸೆ ಅಲಂಕಾರಗಳು ಕವಿದು ಪರಿಯೆ ರಸದೊಳ್ಗಂಪು' ಎಂಬಂಥ ಕಾವ್ಯ ಬರೆಯಲಿ ಎಂಬುದು ಪೋಷಕರ ಆಶಯ. ಆದರೆ ಕವಯಿತ್ರಿಗೆ ಸ್ವಲ್ಪ ಅಳುಕು. 'ಎನ್ನ ಕವಿತೆಗಬ್ಬದ ಬಗೆ ಈ ದಿವ್ಯಸಭೆಗೆ ಸಂಗತಮೆ' ಎಂದು ಶಂಕಿಸುತ್ತಾಳೆ. ಆದರೆ ಪುರುಷರು ಬರೆಯಲಾರದ, ಹೆಣ್ಣಿನ ಮನಸ್ಸನ್ನು ಚೆನ್ನಾಗಿ ಅರಿಯಬಲ್ಲ ಹೆಂಗಸು ತನ್ನದೇ ಆದ ಶೈಲಿಯಲ್ಲಿ ಸ್ತ್ರೀಯರು ಅವಶ್ಯವಾಗಿ ತಿಳಿಯಬೇಕಾದ, ಭಾರತೀಯ ಧರ್ಮಕ್ಕನುಸಾರವಾದ ಹಿಂದಿನಿಂದ ನಡೆದುಬಂದ ಮಾರ್ಗದ ಸ್ತ್ರೀನಡವಳಿಕೆಯನ್ನು ಕುರಿತು ಒಂದು ರಸವತ್ತಾದ ಪ್ರಬಂಧವನ್ನು ರಚಿಸುತ್ತಾಳೆ.

*ಪದಿನೆಂಟು ಬಣ್ಣನೆಯೆಂದು ಬವಣೆಗೊಂಡು*
*ಪದಗೆಟ್ಟು ಬಯಲ ಬಣ್ಣಿಸದೆ*
*ಮುದದೊಡನಿಹಪರದೇಳ್ಗೆವಡೆಯೆ ಹದಿ*
*ಬದೆಯ ಧರ್ಮವ ಬಣ್ಣಿಪೆನು*

ಆದ್ದರಿಂದ 'ಹದಿಬದೆಯಧರ್ಮ' ಕಾವ್ಯವಲ್ಲ. ಅದು ಸ್ತ್ರೀಗೀತೆ, ಪತಿವ್ರತಾಗೀತೆ. ಬರೆದಿರುವುದು ಕಾವ್ಯರೂಪದಲ್ಲಿ. ಅದನ್ನು ಧರ್ಮಶಾಸ್ತ್ರ ಎನ್ನಬಹುದು. 'ಮಹಾಭಾರತ'ದಲ್ಲಿ ಮತ್ತು 'ಮನುಧರ್ಮ ಶಾಸ್ತ್ರ'ದಲ್ಲಿ ಹೇಳಿರುವ ವಿಚಾರಗಳನ್ನು ಕೃತಿರೂಪದಲ್ಲಿ ಹೇಳಿದ್ದೇನೆ ಎನ್ನುತ್ತಾಳೆ.

ಹದಿಬದೆಯ ಧರ್ಮದಲ್ಲಿ ಒಂಬತ್ತು ಸಂಧಿಗಳಿವೆ. ಮೊದಲನೆಯ ಸಂಧಿ ಯನ್ನು ಪೀಠಿಕಾಸಂಧಿಯೆಂದೇ ಕರೆದಿದ್ದಾಳೆ. ಈ ಸಂಧಿಯಲ್ಲಿ ಮೈಸೂರು ಅರಸರ ವಂಶಾವಳಿಯನ್ನು ಸ್ಥೂಲವಾಗಿ ಹೇಳಿ, ಚಿಕ್ಕದೇವರಾಜನ ಮತ್ತು ಅವನ ಪಟ್ಟಮಹಿಷಿ ಯನ್ನು ಕೊಂಡಾಡಿ, ತನ್ನ ಕಾವ್ಯರಚನೆಗೆ ಮಹಾರಾಣಿಯವರ ಕೃಪೆಯೇ ಕಾರಣವೆಂದು ತಿಳಿಸಿ ತಾನು ತನ್ನ ಕೃತಿಗೆ ಆರಿಸಿಕೊಂಡ ವಸ್ತುವನ್ನೂ ಅದರ ಮಹತ್ತ್ವವನ್ನೂ ವಿವರಿಸು ತ್ತಾಳೆ. ಎರಡನೆಯ ಸಂಧಿ 'ಸತೀಧರ್ಮ'ದ ಮಹತ್ತ್ವವನ್ನೂ, ಅದರ ಶಕ್ತಿಯನ್ನೂ ಅದು ಎಲ್ಲ ವ್ರತ ತಪಸ್ಸುಗಳಿಗಿಂತ ಶ್ರೇಷ್ಠವಾದುದೆಂಬುದನ್ನೂ ಅದರ ಆಚರಣೆಯಿಂದ ಲಭಿಸುವ ಸುಖಶಾಂತಿಗಳನ್ನೂ ವರ್ಣಿಸುತ್ತದೆ. ಮೂರನೆಯ ಸಂಧಿ ಪತಿಶುಶ್ರೂಷೆಯ ವಿಧಾನವನ್ನೂ, ನಾಲ್ಕನೆಯ ಸಂಧಿ ಅತ್ತೆ ಮಾವಂದಿರ ಸೇವೆ ಮತ್ತು ಆತ್ಮವಲ್ಲಭನ ಮನೋಗತವನ್ನು ಅರಿತು ನಡೆಯುವ ಕ್ರಮವನ್ನೂ, ಐದನೆಯ ಸಂಧಿ ತಂದೆ, ತಾಯಿ ಒಡಹುಟ್ಟಿದವರು, ಅತ್ತೆ ಮಾವ ಮತ್ತು ಸಕಲ ಬಾಂಧವರು ಮೊದಲಾದವರ ಬಗೆಗೆ ಪರಸ್ಪರವಾಗಿ ನಡೆದುಕೊಳ್ಳುವ ವಿವರವನ್ನೂ, ಆರನೆಯ ಸಂಧಿ ಪ್ರಿಯನಾದವನು ಪ್ರಿಯಳ ಬಗ್ಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನೂ, ಏಳನೆಯ ಸಂಧಿ ಪತಿಯ ವಿರಹದಿಂದ ತಲ್ಲಣಗೊಳ್ಳುವ ಸಾಧ್ವಿಯ ಮನಸ್ಥಿತಿಯನ್ನೂ, ಎಂಟನೆಯ ಸಂಧಿ ಏಕಪತ್ನಿಯ ದಿನಚರ್ಯೆಯನ್ನೂ, ಒಂಭತ್ತನೆಯ ಸಂಧಿ ಪತಿಯೇ ದೈವವೆಂದು ಪತಿಪಾದಭಕ್ತೆಯರು ತಿಳಿದು ಮುಕ್ತಿ ಸಂಪಾದಿಸುವ ರೀತಿಯನ್ನೂ ವಿವರಿಸುತ್ತದೆ.

ಮೇಲ್ಕಂಡ ಒಂಬತ್ತು ಸಂಧಿಗಳಲ್ಲಿ ಅಡಗಿರುವ ವಿಷಯ ಸ್ತ್ರೀಯ 'ಪಾತಿವ್ರತ್ಯ'ದ ನಡವಳಿಕೆಗೆ ಸಂಬಂಧಿಸಿದ್ದು. ಇಂದಿನ ಸ್ತ್ರೀಸ್ವಾತಂತ್ರ್ಯಯುಗದಲ್ಲಿ ಈ 'ನೀತಿ ಬೋಧನೆ'ಗೆ ಎಷ್ಟು ಮಹತ್ವ ದೊರಕುತ್ತದೆ ಎಂಬುದನ್ನು ಆಲೋಚಿಸುವುದು ಸೂಕ್ತ. ಹೊನ್ನಮ್ಮನ ಕಾಲವಾಗಿ ಸುಮಾರು ಮುನ್ನೂರು ವರ್ಷಗಳಾಗಿವೆ. ಈ ಅವಧಿಯಲ್ಲಿ ಭಾರತದ ಸಾಮಾಜಿಕ ಸ್ಥಿತಿಯೇ ಬದಲಾವಣೆ ಆಗಿದೆ. ಭಾರತವನ್ನು ಇನ್ನೂರು ವರ್ಷಕ್ಕೂ ಮೇಲ್ಪಟ್ಟು ಆಳಿದ ಬ್ರಿಟಿಷರ ನಾಗರಿಕತೆಯ ಪ್ರಭಾವ ಭಾರತೀಯರ ಮೇಲೆ ಪರಿಣಾಮಕಾರಿಯಾಗಿ ಆಗಿ, ಭಾರತದ ಸ್ತ್ರೀ ನಾಗರಿಕಳಾಗಿ,

ಆಂಗ್ಲ ಸಮಾಜದ ನಡವಳಿಕೆಯನ್ನು ಅನುಸರಿಸುವುದರಲ್ಲಿ ಹೆಚ್ಚು ಆಸಕ್ತಳಾಗಿದ್ದಾಳೆ. ಆಕೆ ಪುರುಷನ ಸ್ಥಾನಮಾನವನ್ನು ಅಪೇಕ್ಷಿಸುತ್ತಿದ್ದಾಳೆ. ಹೊಸಿಲ ಒಳಗಿದ್ದ ಹೆಣ್ಣು ಅವನ್ನು ದಾಟಿ ಸಮಾಜದ ಆಗುಹೋಗುಗಳಿಗೆ ಕಾರಣಭೂತಳಾಗಿದ್ದಾಳೆ. ಗಂಡಸು ಮಾಡುವ ಎಲ್ಲ ಕೆಲಸಗಳನ್ನು ತಾನೂ ಮಾಡಬಲ್ಲೆ ಎಂದು ತೋರಿಸಿಕೊಡುವ ಸಾಮರ್ಥ್ಯವನ್ನು ಪಡೆದಿದ್ದಾಳೆ. ಅವಳು ಗಂಡಿನ ಸೇವಕಳಲ್ಲ ; ಸಂಸಾರ ರಥದ ಎರಡು ಚಕ್ರಗಳಲ್ಲಿ ಒಂದು. ಆದ್ದರಿಂದ ಸಮಾನ ಸಾಮರ್ಥ್ಯ, ಸಮಪಾಲು, ಸಮಶಕ್ತಿ, ಸಮಭಾವ ಅವಳಿಗಿದೆ ಎಂದು ಕಲ್ಪನೆಯನ್ನು ಮೂಡಿಸಿದ್ದಾಳೆ. ಇಂಥ ಹೆಣ್ಣಿನ ಸ್ಥಿತಿಯಲ್ಲಿ 'ಹದಿಬದೆ'ಯ ಸೇವಾಧರ್ಮವನ್ನು ಬೋಧಿಸುವುದು ಸರಿಯೆ ? ಈ ಪುಸ್ತಕದ ಅವಶ್ಯಕತೆ ಇದೆಯೆ ಎಂಬ ಪ್ರಶ್ನೆಗಳು ಏಳಬಹುದು.

ಮನುಧರ್ಮದ ಪ್ರಕಾರ ಸ್ತ್ರೀಗೆ ಸ್ವಾತಂತ್ರ್ಯವಿಲ್ಲ. ಇದು ಹಳೆಯದು. ಅಲ್ಲಿ ಮನು ಹೆಣ್ಣಿನ ವಿಷಯವನ್ನು ಹೇಳುವಾಗ ಸ್ವಾತಂತ್ರ್ಯ ಎಂಬ ಪದದ ಕಲ್ಪನೆ ಹೇಗೆ ಮಾಡಿ ಕೊಂಡಿದ್ದನೋ ಎಂಬುದನ್ನು ಈಗ ಹೇಳುವುದು ಕಷ್ಟ. ಆಗ ಅವಳು ಅವಿದ್ಯಾವಂತಳು. ಪುರುಷರ ಮಧ್ಯೆ ಹೆಣ್ಣು ನಾಚಿಕೆಯಿಲ್ಲದೆ ನಿಲ್ಲುವುದು ಭೂಷಣವಾಗಿರಲಿಲ್ಲ. ಆಗ ಆಕೆ ವಿದ್ಯಾವಂತಳಾಗಿದ್ದರೂ ಅವಳ ಸಮಾಜ, ಪ್ರಪಂಚ ಬೇರೆ. ಹಿಂದಿನ ಕಾಲದಲ್ಲಿ ಸ್ವತಂತ್ರರಾಗಿ ನಡೆದುಕೊಂಡ ಸ್ತ್ರೀಯರ ಉದಾಹರಣೆಗಳು ನಮಗೆ ದೊರಕಬಹುದು. ಅವು ಉದಾಹರಣೆಗಳಿಗಾಗಿ ಮಾತ್ರ. ಆದರೆ ಸಮಾಜದಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಿದ್ದ ಸ್ಥಿತಿ ಏನು ? ಹೆಂಗಸಿಗೆ ಆಗ ರಕ್ಷಣೆ ಅಗತ್ಯವಾಗಿತ್ತು. ಆ ರಕ್ಷಣೆ ಬೇರೆ ಬೇರೆ ಅವಸ್ಥೆಗಳಲ್ಲಿ ಬೇರೆ ಬೇರೆ ರೀತಿಯಲ್ಲಿದ್ದುವು. ಬಾಲ್ಯದಲ್ಲಿ ಗಂಡುಮಕ್ಕಳಂತೆಯೇ ತಂದೆ ತಾಯಿಗಳ ಪೋಷಣೆ ಅವಶ್ಯಕವಾಗಿತ್ತು. ಯೌವನದಲ್ಲಿ ಸಂಸಾರ ನಡೆಸುವಾಗ ಗಂಡನ ಆಶ್ರಯ ಅನಿವಾರ್ಯವಾಗಿತ್ತು. ವಾರ್ಧಕ್ಯದಲ್ಲಿ ಮಕ್ಕಳ ಆಶ್ರಯ ಬೇಕೇಬೇಕಾಗಿತ್ತು ಗಂಡಸಿಗೆ ಮುದಿತನದಲ್ಲಿ ಆಶ್ರಯ ಬೇಡವಾಗಿತ್ತೇನು ? ಆದ್ದರಿಂದ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಅನ್ನುವಾಗ ಅವಳು ಆಶ್ರಯಹೀನಳಾಗಿರಬಾರದು ಎನ್ನುವುದು ಸೂಚಿತವಾಗುತ್ತದೆ. ಅಲ್ಲದೆ 'ಮನೆ'ಯನ್ನು ಸಂತೋಷದಿಂದ ಇಡಬೇಕಾದರೆ ಭಿನ್ನ ಭಿನ್ನ ಸ್ವಭಾವದ ಎರಡು ವ್ಯಕ್ತಿಗಳಲ್ಲಿ ಹೊಂದಾಣಿಕೆಯಾಗಬೇಕಾದರೆ ಒಂದು ಪರುಷವಾದರೆ ಇನ್ನೊಂದು ಮೃದುವಾಗಿರಬೇಕಾದುದು ಹೊಂದಾಣಿಕೆಯ ದೃಷ್ಟಿಯಿಂದ ಆವಶ್ಯಕ. ದೈವಸೃಷ್ಟಿಯಲ್ಲಿ ಈ ಭೇದವಿದ್ದೇ ಇದೆ. ಇದನ್ನು ಹೊಂದಿಸುವುದರಲ್ಲಿಯೇ ಮಾನವರ ಜಾಣತನವಿದೆ. ಮನೆಯಲ್ಲಿ ಎರಡೂ ವ್ಯಕ್ತಿಗಳಿಗೂ ಸಮಾನತೆಯನ್ನು ಘೋಷಿಸಿ ವ್ಯಕ್ತಿಸ್ವಾತಂತ್ರ್ಯವನ್ನು ಆಚರಣೆಗೆ ತಂದರೆ ಆ ಮನೆ ಹೇಗಿರುತ್ತದೆ ? ಹೆಣ್ಣು ಆ ಸ್ವಾತಂತ್ರ್ಯ ವನ್ನು ಪುರುಷಸ್ವಾತಂತ್ರ್ಯಕ್ಕೆ ಹೊಂದಿಸಿಕೊಂಡು ಹೋದರೆ ಚೆನ್ನು ಎಂಬರ್ಥದಲ್ಲಿ ಈ ಮಾತನ್ನು ಮನು ಸೂತ್ರರೂಪದಲ್ಲಿ ಹೇಳಿರಬಹುದು. ಸೂತ್ರ ಶಾಸ್ತ್ರವಾಗಿ, ಶಾಸ್ತ್ರ ನಿಷ್ಠುರವಾಗಿ, ಸಂಪ್ರದಾಯವಾಗಿ ಬೆಳೆದು 'ಸ್ವಾತಂತ್ರ್ಯ'ಪದದ ಅರ್ಥ ಸಂಕುಚಿತವಾಗಿ

ರೂಢಿಗೆ ಬಂದಿತು. ಹಿಂದೆ ಇದ್ದ ಸಮಾಜಧರ್ಮವನ್ನು, ವೇದ, ಮಹಾಭಾರತ, ಮನುಧರ್ಮಶಾಸ್ತ್ರ, ಧರ್ಮಸೂತ್ರ - ಮೊದಲಾದ ಪೂಜ್ಯ, ಪವಿತ್ರ ಗ್ರಂಥಗಳಲ್ಲಿ ಸೂಚಿತವಾಗಿರುವ ಸಮಾಜದ ಶುದ್ಧತೆಯನ್ನು ಕಾಪಾಡುವ ಸೂಕ್ಷ್ಮನಿಯಮಗಳನ್ನು ಅನುಸರಿಸಿ ಹೊನ್ನಮ್ಮ 'ಹದಿಬದೆಯ ಧರ್ಮ'ವನ್ನು ರಚಿಸಿದಳು. ಕೃತಿಯಲ್ಲಿ ಆಕೆ ಹೆಣ್ಣಿನ ಸಂಪಾದನೆ, ಸಮಾಜದಲ್ಲಿ ಅವಳ ಪಾತ್ರ, ಮನೆಗೆ ಅವಳು ನೀಡಬಹುದಾದ ಆರ್ಥಿಕ ನೆರವು ಮೊದಲಾದ ಅಂಶಗಳ ವಿಚಾರವನ್ನೇ ಎತ್ತಿಲ್ಲ. ಗಂಡನೊಡನೆ ಹೊಂದಿಕೊಂಡು ನಡೆಯುವ, ಅವಳ ಸಂಸಾರ ಚೆನ್ನಾಗಿರಬೇಕೆಂಬ ಭಾವವನ್ನು ಪ್ರದರ್ಶಿಸುವ ವಿಚಾರಗಳನ್ನು ಸನಾತನ ಪದ್ಧತಿಯಿಂದ, ಸರಸಸಜ್ಜನಿಕೆಯಿಂದ ವಿವರಿಸಿದ್ದಾಳೆ.

ಹೊನ್ನಮ್ಮ ಹೆಣ್ಣಿನ ವಿಚಾರದಲ್ಲಿ ಅತ್ಯಂತ ಗೌರವದಿಂದ ನಡೆದುಕೊಂಡಿದ್ದಾಳೆ. 'ಹೆಣ್ಣು ಹೆಣ್ಣೆಂದೇಕೆ ಬೀಳುಗಳೆವರು' ಎಂಬ ಅವಳ ಮಾತು ಸಮಾಜದ ಪುರುಷದೃಷ್ಟಿಯನ್ನು ಆಕ್ಷೇಪಿಸುತ್ತದೆ. ಆಕೆಗೆ 'ಹೆಣ್ಣು ಗೃಹದೇವತೆ'. ಸೃಷ್ಟಿಕರ್ತ ತನಗೆ ಒಪ್ಪಿಸಿದ ಕರ್ತವ್ಯವಾದ ಪತಿಸೇವೆಯನ್ನು ಶ್ರದ್ಧೆಯಿಂದ ಮಹಿಳೆ ಮಾಡಿದರೆ ಅವಳಿಗೆ ಮುಕ್ತಿ ದೊರಕುತ್ತದೆ ಎಂದು ಕವಯಿತ್ರಿ ಅಭಿಪ್ರಾಯಪಡುತ್ತಾಳೆ. ವ್ಯಕ್ತಿಯ ಪಾಲಿಗೆ ಬಂದ ಕರ್ತವ್ಯ ಏನು ? ಅದರ ನಿಷ್ಠೆ ಎಷ್ಟರ ಮಟ್ಟಿಗೆ ಅವಶ್ಯಕ ಎಂಬ ಅಂಶಗಳನ್ನು ವಿವರಿಸುವುದೇ ಆಕೆಯ ಉದ್ದೇಶ. ಈ ಉದ್ದೇಶವನ್ನು ಸಾಧಿಸುವಾಗ ಪ್ರಾಚೀನ ಪದ್ಧತಿಯನ್ನು ಗ್ರಂಥಕರ್ತೆ ಹಿನ್ನೆಲೆಯಾಗಿ ಬಳಸಿಕೊಂಡಿದ್ದಾಳೆ. ನಾವು 'ಹದಿಬದೆಯ ಧರ್ಮ' ಗ್ರಂಥವನ್ನು ಪರಿಶೀಲಿಸುವಾಗ ಒಂದು ಮುಖ್ಯಾಂಶ ಗೋಚರವಾಗದೆ ಹೋಗುವುದಿಲ್ಲ. ಅದೆಂದರೆ ವೈವಾಹಿಕ ಜೀವನವನ್ನು ನಡೆಸುವ ದಂಪತಿಗಳ 'ಮನಸ್ಥಿತಿ'. ಸುಖಸಂಸಾರವನ್ನು ಬಯಸುವ ಗಂಡುಹೆಣ್ಣುಗಳ ಮನಸ್ಸು ಹೇಗಿರಬೇಕು ಎಂಬುದನ್ನು ವಿವರಿಸುವ ಒಂದು ಮನಶ್ಶಾಸ್ತ್ರ ಈ ಕೃತಿ ಎಂದರೆ ತಪ್ಪಾಗಲಾರದು. ಸಂಸಾರದ ಹೃದಯದಂತಿರುವ ಹೆಣ್ಣಿನ ಬೆಳವಣಿಗೆ, ಅವಳ ಪೋಷಣೆ, ರಕ್ಷಣೆ, ತಂದೆ ತಾಯಿಯರು ಅವಳ ಮನಸ್ಸನ್ನು ತಿದ್ದುವ ರೀತಿ, ಅವಳ ಬಂಧು ಬಳಗ ಅವಳನ್ನು ಕಾಣುವ ಕ್ರಮ, ಅವಳು ಹೆತ್ತವರನ್ನು ಪತಿಗೃಹದ ಸಂಬಂಧಿಗಳನ್ನು ನೋಡಿಕೊಳ್ಳುವ ರೀತಿಗಳನ್ನು ಕವಯಿತ್ರಿ ಬಿಡಿಸಿ, ಬಿಡಿಸಿ ಚಿತ್ರಿಸಿದ್ದಾಳೆ. ಆಕೆ ಪತಿಗಾಗಿ ಹಂಬಲಿಸುವ ವಿವರಣೆ ಒಂದು ವಿರಹಕಾವ್ಯದಂತೆಯೇ ಇದೆ. ಹೊನ್ನಮ್ಮ ಹೆಣ್ಣನ್ನೇ, ಅವಳ ಮನೋವಿಚಾರವನ್ನೇ ಗಮನದಲ್ಲಿಟ್ಟುಕೊಂಡು ಕೃತಿರಚನೆ ಮಾಡಿದ್ದರೂ ಅವಳಿಂದ ಸಹಕಾರ ಪಡೆಯಬೇಕಾದ ಗಂಡಸು, ಎಂದರೆ, ನಲ್ಲ ಅಥವಾ ಪತಿ ಆಕೆಯ ವಿಷಯಕ್ಕೆ, ಹೆಣ್ಣಿನ ಸ್ವಭಾವಕ್ಕೆ ತಕ್ಕಂತೆ ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಆರನೆಯ ಸಂಧಿಯ ತುಂಬ ಹೇಳಿದ್ದಾಳೆ. ಆದ್ದರಿಂದ ಇದು 'ಸ್ವಾತಂತ್ರ್ಯಕ್ಕೆ ಅರ್ಹಳಲ್ಲ' ಎಂಬ ಮನುವಿನ ನುಡಿಯ ವ್ಯಾಖ್ಯಾನವಾಗದೆ 'ಸ್ತ್ರೀ'ಯ ಅದರಲ್ಲೂ ಗೃಹಿಣಿಯಾದ 'ಸ್ತ್ರೀ'ಯ ಸ್ವಭಾವವೈಶಿಷ್ಟ್ಯವನ್ನು ಪ್ರತಿಪಾದಿಸುವ ಸನ್ನುತಿ

ಪಡೆದ ಕೃತಿ. ಈ ಕಾರಣದಿಂದ ಈ ಕಾಲಕ್ಕೂ ಇದು ಅವಶ್ಯವಾಗಿ ಉಪಯೋಗ ವಾಗುವ ಗ್ರಂಥ. ಸ್ತ್ರೀ ಬಹಿರಂಗವಾಗಿ, ಮನೆಯ ಹೊರಗಡೆ ಪುರುಷನೊಡನೆ ಉದ್ಯೋಗಾದಿಗಳಲ್ಲಿ ಸಮಾನತೆಯನ್ನು ಆರ್ಥಿಕವಾಗಿ ಸ್ವಾತಂತ್ರ್ಯವನ್ನು ಬಯಸುತ್ತಿರು ವಾಗಲೂ, 'ಸಂಸಾರ'ವೆಂಬ ಉದ್ಯಮದಲ್ಲಿ ಆಕೆಯ ಪಾತ್ರ ಎಷ್ಟು ಸೂಕ್ಷ್ಮ ಮೃದು ಎಂಬುದನ್ನು ಗಮನಿಸಲು ಸಹಾಯಕವಾಗುವ ಕೃತಿ ಹದಿಬದೆ ಧರ್ಮ. ಸಂಸಾರದ 'ಹುಟ್ಟಿದ ಮನೆ, ಸೇರಿದ ಮನೆ'ಗಳ ಬಂಧುಬಾಂಧವರನ್ನು ಸಂತೋಷಪಡಿಸಿ, ಅವರ ಮುಂದೆ ಅರಳಿದ ಹೂವಿನ ಸುವಾಸನೆಯನ್ನು ಬೀರುತ್ತ ಸುಖಸಂಪದ್ಯುಕ್ತ ವಾತಾವರಣ ವನ್ನು ಕಲ್ಪಿಸುವ ಹೆಣ್ಣಿನ ನಡತೆಯನ್ನು ಹೊನ್ನಮ್ಮ ಸರಳವಾಗಿ, ಸುಂದರವಾಗಿ, ಮನೋಹರವಾಗಿ ಗುಣಪೂರ್ಣವಾಗಿ ಚಿತ್ರಿಸಿದ್ದಾಳೆ.

ಪರಿಷತ್ತು ಕೈಗೊಂಡಿರುವ ಹಳಗನ್ನಡ ನಡುಗನ್ನಡ ಕಾವ್ಯಗಳ ಸಾಲಿನಲ್ಲಿ ಈ ಪುಟ್ಟ ಕೃತಿಯನ್ನು ಸೇರಿಸಿಕೊಂಡಿರುವುದು ಉಚಿತವಾಗಿದೆ. ಇಲ್ಲಿನ ಸಾಂಗತ್ಯಗಳಿಗೆ ಅನುವಾದವನ್ನು ಮತ್ತಷ್ಟು ಸರಳವಾಗಿ ಮಾಡುವುದು ಕಷ್ಟವೇ. ಆದರೆ ಪದ್ಯದಲ್ಲಿರುವ ಭಾವ ಹೊಸಗನ್ನಡ ಗದ್ಯದಲ್ಲಿರಲಿ ಎಂಬ ಉದ್ದೇಶದಿಂದ ಇದನ್ನು ಅನುವಾದಿಸ ಲಾಗಿದೆ.

ಈ ಅನುವಾದವನ್ನು ಬರೆಯಲು ನೆರವಿತ್ತು ಪ್ರೋತ್ಸಾಹಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಗೆ ಕೃತಜ್ಞನಾಗಿದ್ದೇನೆ.

ಬೆಂಗಳೂರು
೬-೪-೧೯೭೮

**ಎನ್. ರಂಗನಾಥ ಶರ್ಮಾ**
ಅನುವಾದಕ

# ಮೊದಲನೆ ಸಂಧಿ

ಶ್ರೀಮದಮಲಗುಣನಿಧಿಗೆ ನಿತ್ಯನಿಗೆ ನಿ
ಸ್ಸೀಮ ಕೃಪಾವಾರಿಧಿಗೆ
ರಾಮಣೀಯಕರಾಶಿಗೆ ಪಶ್ಚಿಮ ರಂಗ
ಧಾಮನಿಗಾನೆರಗುವೆನು ೧

ರಂಗಧಾಮನ ದಿವ್ಯಾಂಗ ಸಂಗತಿಯಿಂ
ಮಂಗಳದೇವತೆಯೆನಿಪಾ
ರಂಗಮಂದಿರ ಮಂಗಳವೈಜಯಂತಿಗೆ
ರಂಗನಾಯಕಿಗೆರಗುವೆನು ೨

ಆದಿನಾರಾಯಣನಾ ಶೇಷನೊಡಗೂಡಿ
ಯಾದರದಿಂದವತರಿಸೆ
ಯಾದವಕುಲವೇಳಿಗೆವೆತ್ತಿರ್ಪುದು
ಮೇದಿನಿಯೊಳು ಮೈಮೆವಡೆದು ೩

ಆ ಯಾದವರಿಗೆ ಕುಲದೇವರೆನಿಪ ನಾ
ರಾಯಣ[೧]ನಾದಿ[೧] ಕಾರಣನು
ಶ್ರೀಯೊಡಗೂಡಿ ಕರ್ಣಾಟಕದೇಶದೊ
ಳೀ ಯಾದವಾದ್ರಿಯೊಳಿಹನು ೪

೧. ಶ್ರೀಯುತನೂ ಪರಿಶುದ್ಧ ಗುಣಗಳಿಗೆ ನಿಧಿಯೂ ನಿತ್ಯನೂ ಅಪಾರ ಕರುಣಾ ಸಮುದ್ರನೂ ಸೌಂದರ್ಯದ ರಾಶಿಯೂ ಪಶ್ಚಿಮರಂಗ (ಶ್ರೀರಂಗಪಟ್ಟಣ) ನಿವಾಸನೂ ಆದ ಶ್ರೀರಂಗನಾಥಸ್ವಾಮಿಗೆ ವಂದಿಸುತ್ತೇನೆ. ೨. ಶ್ರೀರಂಗನಾಥನ ದಿವ್ಯಾಂಗ ಸಂಬಂಧ ದಿಂದ ಮಂಗಳದೇವತೆ ಎನಿಸಿರುವ ಮತ್ತು ಶ್ರೀರಂಗಸ್ವಾಮಿಯ ಗೃಹದ ಮಂಗಳ ಪತಾಕೆಯೂ ಆದ ಶ್ರೀರಂಗನಾಯಕಿಗೆ ನಮಸ್ಕರಿಸುತ್ತೇನೆ. ೩. ಆದಿನಾರಾಯಣನು ಶೇಷನೊಡನೆ ಆದರದಿಂದ ಯಾದವಕುಲದಲ್ಲಿ ಅವತರಿಸಿದ್ದರಿಂದ ಆ ಯದು ವಂಶವು ಭೂಮಿಯಲ್ಲಿ ಮಹಿಮಾನ್ವಿತವಾಗಿ ಕೀರ್ತಿಶಾಲಿಯಾಗಿರುತ್ತದೆ[೨]. ೪. ಅಂಥ ಯದುವಂಶದವರಿಗೆ ಕುಲದೇವತೆಯೂ ಆದಿಕಾರಣನೂ ಆದ ಶ್ರೀ ಮನ್ನಾ ರಾಯಣನು ಲಕ್ಷ್ಮೀದೇವಿಯೊಡಗೂಡಿ ಈ ಕರ್ಣಾಟಕದೇಶದ ಯಾದವಾದ್ರಿಯಲ್ಲಿ

---

೧. (ಖ) ನಖಿಲ. ೨. ಶ್ರೀಕೃಷ್ಣನು ಬಲರಾಮನೊಡನೆ ಯದುಕುಲದಲ್ಲಿ ಅವತರಿಸಿದ ವೃತ್ತಾಂತ ಇಲ್ಲಿ ಸೂಚಿತವಾಗಿದೆ.

ಬಲಕೃಷ್ಣರಿಂದೆ ಪಲವು ಪೂಜೆಗೊಂಡಿರ್ಪ
ಕುಲದೇವರ ಸೇವೆಗೆಂದು
ಪಲವು ಯಾದವರಾಯರಾ ದ್ವಾರಾವತಿಯಿಂ
ದೊಲಿದೈತಂದರೀ ನೆಲಕೆ ೫

ಶ್ರೀ ನಾರಾಯಣನಡಿಗಳಿಗೆರಗಿ ಮ
ಹಾನಂದರಸದ ಮೈಮೆಯೊಳು
ಆ ನೆಲೆಯನು ಬಿಟ್ಟಗಲಲಾರದೆ ತಾ
ವೀ ನಾಡೊಳು ನೆಲಸಿದರು ೬

ಈ ·ಶೈಲಕೆರಡು ಗಾವುದ ತೆಂಕಣ ರಮ್ಯ
ದೇಶದ ನೆಲೆವೀಡುಗೊಳಿಸಿ
ಈ ಶೂರರು ನೆಲಸಿದರದರಿಂದೆ ಮ
ಹೀಶೂರಪುರವೆನಿಸಿದುದು ೭

ಆ ದಿನ ಮೊದಲು ಮೈಸೂರನಾಳಿದರಾ
ಯಾದವಕುಲವರ್ಧನರು
ಶ್ರೀ ದೇವರಾಜಚಂದ್ರಮನವತರಿಸಿದ
ನಾ ದಿವ್ಯವಂಶವಾರ್ಧಿಯೊಳು ೮

(ಮೇಲುಕೋಟೆ) ನೆಲಸಿದ್ದಾನೆ. ೫. ಬಲರಾಮ ಶ್ರೀ ಕೃಷ್ಣರಿಂದ ಹಲವು ಬಗೆಯಲ್ಲಿ ಅರ್ಚನೆಯನ್ನು ಸ್ವೀಕರಿಸಿದ ಕುಲದೇವರ ಸೇವೆಗಾಗಿ, ಕೆಲವು ಯಾದವರಾಜರು ಈ ದೇಶಕ್ಕೆ ಒಲಿದು ಬಂದರು. ೬. ಅವರು ಶ್ರೀಮನ್ನಾರಾಯಣನ ಅಡಿಗಳಿಗೆ ಎರಗಿ ಅತ್ಯಾನಂದದ ಮಹಿಮೆಯಲ್ಲಿ ಮುಳುಗಿ ಆ ಸ್ಥಳವನ್ನು ಬಿಟ್ಟು ಅಗಲಲಾರದೆ ಈ ನಾಡಿನಲ್ಲಿ ನೆಲೆಸಿದರು. ೭. ಈ ಯಾದವಾದ್ರಿಗೆ (ಮೇಲುಕೋಟೆ) ಎರಡು ಗಾವುದ ದೂರದ ದಕ್ಷಿಣದಲ್ಲಿರುವ ಒಂದು ರಮ್ಯಸ್ಥಳವನ್ನು ವಾಸಸ್ಥಾನವಾಗಿ ಮಾಡಿಕೊಂಡು, ಈ ಶೂರರ (ಯಾದವರಾಜರು) ನೆಲೆಸಿದ್ದರಿಂದ ಅದಕ್ಕೆ ಮಹೀಶೂರ (ಮೈಸೂರು) ನಗರವೆಂದು ಹೆಸರಾಯಿತು. ೮. ಅಲ್ಲಿಂದ ಮೊದಲು ಆ ಯಾದವಕುಲಶ್ರೇಷ್ಠರು ಮೈಸೂರನ್ನು ಆಳತೊಡಗಿದರು. ಅಂಥ ದಿವ್ಯಕುಲವೆಂಬ ಸಮುದ್ರದಲ್ಲಿ ಶ್ರೀದೇವರಾಯ

ಭಾವಿಸೆ ಭೋಗಭಾಗ್ಯದೊಳೈಸಿರಿಯೊಳು
ದೇವೇಂದ್ರಗೆ ಮಿಗಿಲೆನಿಸಿ
ದೇವರಾಜನ ಬಸುರಿಂದೊಗೆದನು ದೊಡ್ಡ
ದೇವರಾಜೇಂದ್ರ ಭೂವರನು ೯

ಭೂವನಿತೆಯ ಪುಣ್ಯದ ಪುಂಜ ಮಾನುಷ
ಭಾವವ ಪಡೆದುದೆಂಬಂತೆ
ಈ ವಸುಧೀಶನಿಂದೊಗೆದೆಸೆದನು ಚಿಕ್ಕ
ದೇವರಾಜನು ತೇಜದೊಳು ೧೦

ಶ್ರೀರಂಗಪಟ್ಟಣದೊಳು ರತ್ನಸಿಂಹಾಸ
ನಾರೋಹಣವನಾಚರಿಸಿ
ಧಾರಿಣಿಯನು ಧರ್ಮದೊಳು ಪಾಲಿಸುತ ಮ
ಹಾರಾಜನೆನಿಸಿ ರಾಜಿಪನು ೧೧

ಶ್ರೀ ಯುವತೀಶನಖಿಲಗುಣನಿಧಿ ನಾ
ರಾಯಣನಾದಿಕಾರಣನು
ಆಯುರಾರೋಗ್ಯೈಶ್ವರ್ಯವ ಚಿಕದೇವ
ರಾಯನಿಗನುಗೊಳಿಸುವನು ೧೨

ಧರೆಯ ಪೊರೆವ ಧರ್ಮವ ಸಂಪಾದಿಪ
ಧುರವ ಗೆಲುವ ಗ್ರೈಮೆಯೊಳು
ನರಪತಿ ಚಿಕದೇವರಾಜೇಂದ್ರಗೆ ಶೌರಿ
ನೆರವಾಗಿಹನು ನೇಮದೊಳು ೧೩

ನೆಂಬ ಚಂದ್ರಮನು ಹುಟ್ಟಿದನು. ೯. ಆ ದೇವರಾಯನ ಗರ್ಭದಿಂದ, ಆಲೋಚಿಸಿದರೆ ಭೋಗಭಾಗ್ಯಗಳಲ್ಲಿಯೂ ಐಶ್ವರ್ಯದಲ್ಲಿಯೂ ದೇವೇಂದ್ರನಿಗೆ ಮಿಗಿಲೆನಿಸಿದ ದೊಡ್ಡ ದೇವರಾಯನೆಂಬ ಭೂಪತಿಯು ಜನಿಸಿದನು. ೧೦. ಭೂದೇವಿಯ ಪುಣ್ಯರಾಶಿಯೇ ಮನುಷ್ಯರೂಪವನ್ನು ತಳೆದುದೋ ಎಂಬಂತೆ, ಈ ಭೂಪತಿಯಿಂದ ಚಿಕ್ಕದೇವ ರಾಜನು ಜನಿಸಿ ತೇಜಸ್ಸಿನಿಂದ ಬೆಳಗಿದನು. ೧೧. ಆತನು ಶ್ರೀರಂಗಪಟ್ಟಣದಲ್ಲಿ ರತ್ನಸಿಂಹಾಸನವನ್ನೇರಿ ಧರಣಿಯನ್ನು ಧರ್ಮದಿಂದ ಪಾಲಿಸುತ್ತ, ಮಹಾರಾಜನೆನಿಸಿ ವಿರಾಜಿಸುತ್ತಿದ್ದಾನೆ. ೧೨. ಲಕ್ಷ್ಮೀಪತಿಯೂ ನಿಖಿಲಗುಣನಿಧಿಯೂ ಆದಿಕಾರಣನೂ ಆದ ಶ್ರೀಮನ್ನಾರಾಯಣನು ಚಿಕ್ಕದೇವರಾಜನಿಗೆ ಆಯುರಾರೋಗ್ಯೈಶ್ವರ್ಯಗಳನ್ನು ಅನುಗ್ರಹಿಸುತ್ತಿರುವನು. ೧೩. ಧರೆಯನ್ನು ಪೊರೆಯುವ, ಧರ್ಮವನ್ನು ಸಂಪಾದಿಸುವ, ಯುದ್ಧವನ್ನು ಗೆಲ್ಲುವ ಕಾರ್ಯಗಳಲ್ಲಿ ಚಿಕ್ಕದೇವರಾಜೇಂದ್ರನಿಗೆ ಶ್ರೀಕೃಷ್ಣನು ತಪ್ಪದೆ

ಚಿಕದೇವರಾಜಚಂದ್ರಮನ ಪಟ್ಟದ ರಾಣಿ
ಸಕಲ ಸದ್ಗುಣ ಸಂಪನ್ನೆ
ಅಕಲುಷೆ ಯೆಳವಂದೂರ ದೇವಮ್ಮನು
ಸಕಲ ಸಂಪದದೊಡನಿಹಳು ೧೪

ಇಷ್ಟಗುಣೆಯರೆಣ್ಬರು ಮತ್ತೆ ರಾಣಿಯ
ರಷ್ಟೈಶ್ವರ್ಯ ಲಕ್ಷ್ಮಿಯರೊ
ಅಷ್ಟದಿಗ್ವಿಜಯಲಕ್ಷ್ಮಿಯರೊ ತಾಮೆನೆ ಸಂ
ತುಷ್ಟಿಯೊಳೊಡವೆರೆದಿಹರು ೧೫

[1]ಹಡಪ[1] ಕಾಳಾಂಜಿ ಪೊಂಗಟ್ಟಿಗೆ ಕುಂಚ ಕ
ನ್ನಡಿ ಗಿಂಡಿ ಬಿಜ್ಜಣಿಗೆಗಳ
ಪಿಡಿದೂಳಿಗಗೈವ ಬಿಂಕಗಾತಿಯರಾ
ಪೊಡವಿಯಾಣ್ಮನ ಹೊದ್ದಿಹರು ೧೬

ಪಾಡುವ ಕುಣಿವ ಬಾಜಿಪ [2][ಬಣ್ಣನೆ][2] ವಾ
ತಾಡುವ ಪರಿಹಾಸಗೈವ
ಗಾಡಿಕಾತಿಯರು ಗಣನೆಯಿಲ್ಲದೆ ಜೋಡು
ಗೂಡಿರುವರು ಕೂರ್ಮೆಯೊಳು ೧೭

ನೆರವನ್ನು ನೀಡುತ್ತಿದ್ದಾನೆ. ೧೪. ಸಕಲ ಸದ್ಗುಣಸಂಪನ್ನೆಯೂ ಸಾಧ್ವಿಯೂ ಆದ ಯೆಳವಂದೂರಿನ ದೇವಮ್ಮನು ಚಿಕ್ಕದೇವರಾಜಚಂದ್ರನ ಪಟ್ಟದ ರಾಣಿಯಾಗಿ ಸಕಲ ಸಂಪತ್ತಿನೊಡನೆ ಇದ್ದಾಳೆ. ೧೫. ಅಲ್ಲದೆ ಇನ್ನೂ ಎಂಟು ಮಂದಿ ಗುಣಶಾಲಿಗಳಾದ ರಾಣಿಯರು ಅಷ್ಟೈಶ್ವರ್ಯ ಲಕ್ಷ್ಮಿಯರೋ ಅಥವಾ ಎಂಟು ದಿಕ್ಕುಗಳ ವಿಜಯ ಲಕ್ಷ್ಮಿಯರೋ ಎಂಬಂತೆ ಸಂತುಷ್ಟಿಯಿಂದ ಜೊತೆಗಿದ್ದಾರೆ. ೧೬. ಸಂಚಿ, ಉಗಿಯುವ ತಟ್ಟೆ (ಪೀಕದಾನಿ), ಚಿನ್ನದ ಕೋಲು, ಚಾಮರ, ಕನ್ನಡಿ, ಗಿಂಡಿ, ಬೀಸಣಿಗೆಗಳನ್ನು ಹಿಡಿದು ಸೇವೆ ಮಾಡುವ ಸೊಗಸುಗಾತಿಯರು ಆ ಮಹಾರಾಜನನ್ನು ಆಶ್ರಯಿಸಿಕೊಂಡಿದ್ದಾರೆ. ೧೭. ಹಾಡುವ, ನರ್ತಿಸುವ, ವಾದ್ಯಗಳನ್ನು ನುಡಿಸುವ, ವರ್ಣನೆ ಮಾಡುವ, ಹಾಸ್ಯಮಾಡುವ ಗಾಡಿಕಾತಿಯರು ಲೆಕ್ಕವಿಲ್ಲದಷ್ಟು ಸಂಖ್ಯೆಯಲ್ಲಿ ಆ ಮಹಾರಾಜನ ಬಳಿ ಪ್ರೀತಿಯಿಂದ ಸೇರಿಕೊಂಡಿದ್ದಾರೆ.

---

೧. (ಗ) ಅಡಪ. ೨. ಬನ್ನಣೆ (ಕ, ಖ, ಗ)

ನೋಂತು ಚತುಷ್ಷಷ್ಟಿ ಕಲೆಗಳು ಪೆಣ್ಬರಿ
ಜಾಂತು ಸೇರಿದುವೊ ಎಂಬಂತೆ
ಸಂಸತ ಮಿಗೆ ಸರ್ವ ಸರಸವಿದ್ಯಾ ಸಿ
ದ್ಧಾಂತವೇದಿನಿಯರೊಪ್ಪಿಹರು ೧೮

ಪಲರಾಣಿಯರೂಳಿಗದ ಪೆಣ್ಗಳುಮಿ
ಕ್ಕೆಲದೊಳು "ಪಂಕ್ತಿ" ಗೊಂಡೆಸೆಯೆ
ನೆಲದಾಣ್ಮನೊಳವೋಲಗದೊಳೊಪ್ಪಿದನಾ
ಬಲವೈರಿಗೆ ಪಡಿಯೆನಿಸಿ ೧೯

ಓಲಗಗೊಳುತೊಂದು ದಿನವೆಡಬಲದ ಸು
ಶೀಲೆಯರೊಳು ಕಡೆಗಣ್ಣಾ
ಸಾಲುವಿಡಿದು ಸುಳಿಸುಳಿಸಿಯೆನ್ನೊಳು ಸತ್ಕೃ
ಪಾಲೋಕನವೆನಸಗಿದನು ೨೦

ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ
ತರತರದೊಳು ಕವಿತರುವ
ಸರಸಕಟಾಕ್ಷವನೆಸಗಿಯೆನ್ನೊಳು ಮನ
ಗರಗಿ ಮನ್ನಿಸಲೆಳಸಿದನು ೨೧

೧೮. ಅರುವತ್ತು ನಾಲ್ಕು ಕಲೆಗಳು ಪುಣ್ಯ ಮಾಡಿ ಸ್ತ್ರೀರೂಪವನ್ನು ಧರಿಸಿ ಸೇರಿವೆಯೋ ಎಂಬಂತೆ ಸರಸವಾದ ಸಮಸ್ತವಿದ್ಯೆಗಳಲ್ಲಿಯೂ ಪ್ರವೀಣೆಯರಾದ ಸ್ತ್ರೀಯರು ವಿರಾಜಿಸುತ್ತಿದ್ದಾರೆ. ೧೯. ಹಲವರು ರಾಣಿಯರೂ ಊಳಿಗದ ಹೆಂಗಸರೂ ಎರಡು ಕಡೆಗಳಲ್ಲಿ ಸಾಲಾಗಿ ಎಸೆದಿರಲು, ಒಂದು ದಿನ ಮಹಾರಾಜನು ದೇವೇಂದ್ರನಿಗೆ ಸಾಟಿಯೆಂಬಂತೆ ಓಲಗವನ್ನಿತ್ತನು. ೨೦. ಹಾಗೆ ಓಲಗದಲ್ಲಿದ್ದಾಗ ಎಡಬಲದ ಸಾಧ್ವಿಯರಲ್ಲಿ ಕಡೆಗಣ್ಣಿನ ನೋಟವನ್ನು ಸುಳಿಸುತ್ತ ಸುಳಿಸುತ್ತ, ಚಿಕ್ಕದೇವರಾಜೇಂದ್ರನು ನನ್ನಲ್ಲಿ ಕೃಪಾದೃಷ್ಟಿಯನ್ನು ಬೀರಿದ್ದನು. ೨೧. ಕರುಣಾಮೃತಸಮುದ್ರದ ಅಲೆಗಳೋ ಎಂಬಂತೆ ತರತರದಲ್ಲಿ ಮುನ್ನುಗ್ಗುವ ಸರಸಕಟಾಕ್ಷಗಳನ್ನು ಬೀರಿ ಮನಗರಗಿ, ಸಂಮಾನಿಸಲು

೪. (ಗ) ಹಂತಿ.

ಎನ್ನ ಮನ್ನಿಪೆನೆಂದಣೆಸಿ ತನ್ನೆಡೆದೊಳು
ಪೊನ್ನ ಪುತ್ತಳಿಯಂತೆಸೆವ
ಮನ್ನಣೆವಡೆದ ಪಟ್ಟದ ರಾಣಿಯ ಮೊಗ
ಮನ್ನೋಡುತಿಂತು ನುಡಿದನು ೨೨

ಆರಸಿ ಕೇಳೀ ಹೊನ್ನಿ ಸರಸಸಾಹಿತ್ಯದ
ವರದೇವತೆ ತಾನೆಂದು
ಪರಮಾರ್ಥವಾದಿಯಳಸಿಂಗರಾರ್ಯನು
ಪರಿಪರಿಯೊಳು ಬಣ್ಣಿಪನು ೨೩

ಓದುಗಲಿಸುವರೊಲಿದು ಪೊಗಳಿದೊಡಾ
ವೋದುಗಲಿವರೋದುಗಳು
ಮೇದಿನಿಯೊಳು ಮೇಲೆನಿಪುವೆಂಬುದು ಲೋಕ
ವಾದವ್ವೆಸಲೆ ರಾಣಿ ಕೇಳು ೨೪

ಇವಳು ಕಾವ್ಯಾಲಂಕಾರನಾಟಕಗಳ
ಪವಣಿಗೆಯಿರವ ಬಲ್ಲವಳು
ಇವಳ ಸಾಹಿತ್ಯದ ಸವಿಗೆಳಸುತ್ತೆನ್ನ
ಕಿವಿಗಳು ಕದುಬುಗೊಂಡಿಹವು ೨೫

ಬಯಸಿದನು. ೨೨. ಮಹಾರಾಜನು ನನ್ನನ್ನು ಮನ್ನಿಸಬೇಕೆಂದೆಣಿಸಿ, ತನ್ನ ಎಡದಲ್ಲಿ ಚಿನ್ನದ ಪುತ್ತಳಿಯಂತೆ ಎಸೆಯುತ್ತಿದ್ದ ಮಾನ್ಯಳಾದ ಪಟ್ಟದ ರಾಣಿಯ ಮುಖವನ್ನು ನೋಡುತ್ತ ಹೀಗೆ ನುಡಿದನು. ೨೩. "ಅರಸಿ ಕೇಳು ; ಈ ಹೊನ್ನಿ ಸರಸಸಾಹಿತ್ಯದ ಅಧಿದೇವತೆ" ಎಂದು ಯಥಾರ್ಥವಾದಿಯಾದ ಅಳಸಿಂಗರಾರ್ಯನು ಪರಿಪರಿಯಲ್ಲಿ ಹೊಗಳುತ್ತಾನೆ. ೨೪. ಓದುಗಲಿಸುವ ಗುರುಗಳು ಒಲಿದು ಹೊಗಳಿದರೆ ಓದುಗಲಿಯುವ ಶಿಷ್ಯರ ಓದು ಜಗತ್ತಿನಲ್ಲಿ ಶ್ರೇಷ್ಠವೆನಿಸುವು ದೆಂದು ಲೋಕದ ಹೇಳಿಕೆ ಇದೆಯಲ್ಲವೆ ? ರಾಣಿ. ೨೫. ಇವಳು (ಹೊನ್ನಿ) ಕಾವ್ಯಾಲಂಕಾರ ನಾಟಕಗಳ ಹೊಂದಿಕೆಯ ರೀತಿಯನ್ನು ಬಲ್ಲವಳು. ಇವಳ ಸಾಹಿತ್ಯದ ಸೊಗಸನ್ನು ಸವಿಯಬೇಕೆಂದು ನನ್ನ ಕಿವಿಗಳು ಉತ್ಸಾಹಗೊಂಡಿವೆ !

ಪವಣಿಗೆಯೊಪ್ಪೆ ಪುರುಳು ಪೋಗರೇರೆಯಂ
ಗವಿಸೆಯಲಂಕಾರಗಳು
ಕವಿದು ಪರಿಯೆ ರಸದೊಳ್ಗಂಪು "[ಕ]"ಮ್ಮನೆ
ಕವಿತೆಯೊಂದನು ಪೇಳಿಸಿಂದು ೨೬

ಎಂದ ರಾಯನ ನುಡಿಗಾನು ವಿನಯಗೂಡಿ
ಪಿಂದೆಗೆದಿರೆ ಪಟ್ಟದರಸಿ
ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾ
ರೆಂದು ಮುಂದಕೆ ಬರಿಸಿದಳು ೨೭

'ಹೊನ್ನಿ ಬಾ ಹೊನ್ನಕ್ಕ' ಬಾರೆಂದು ಕರವಿಡಿ
ದೆನ್ನ ತನ್ನೊತ್ತಿಗೆ ಬರಿಸಿ
ಎನ್ನೊಳು ನೆವಮಿನಿತಿಲ್ಲದೆರಕಗೂಡಿ
ಮನ್ನಿಸಿ ನುಡಿದಳಿಂತೆಂದು ೨೮

ಕಲಿತ ಬಿಜ್ಜೆಯಂ ಬಲ್ಲರಿಗೆ ಕೇಳಿಪುದೈಸೆ
ಫಲವಿದನರಿತು ನೀನಿಂದು
ಅಲಸದೆ ನಾಣ್ಚದಂಜದೆಯಳುಕದೆ ಪೇಳು
ಪಲವಗೆ ಕಬ್ಬದೊಳ್ಪುಗಳ ೨೯

೨೬. ರಾಣಿ, ಇಂದು ಇವಳಿಂದ ಕವಿತೆಯೊಂದನ್ನು ಹೇಳಿಸು - ರಚಿಸುವಂತೆ ಮಾಡು. ಔಚಿತ್ಯವಿರಲಿ, ಅರ್ಥಕಾಂತಿ ತುಂಬಿರಲಿ. ಅಲಂಕಾರಗಳು ಕೂಡಿರಲಿ, ರಸದ ಒಳ್ಗಂಪು ಕಮ್ಮನೆ ಸೂಸಲಿ!" ೨೭. ಹೀಗೆ ಮಹಾರಾಜನು ನುಡಿಯಲಾಗಿ ನಾನು ವಿನಯದಿಂದ ಹಿಂದೆಗೆದೆನು. ಆಗ ಪಟ್ಟದ ರಾಣಿಯು "ಕಂದ ಬಾ, ನನ್ನ ಕಟ್ಟಾಣಿ ಪೆಣ್ಮಣಿಯೆ, ಬಾ" ಎಂದು ನನ್ನ ಕೈ ಹಿಡಿದು ಮುಂದಕ್ಕೆ ಕರೆದಳು. ೨೮. 'ಹೊನ್ನಿ ಬಾ, ಹೊನ್ನಕ್ಕ ಬಾ, ಎಂದು ನನ್ನ ಕೈ ಹಿಡಿದು ರಾಣಿಯು ತನ್ನ ಬಳಿಗೆ ಕರೆದೊಯ್ದು, ನಿರ್ವ್ಯಾಜವಾದ ಪ್ರೀತಿಯಿಂದ ಮನ್ನಿಸಿ ಹೀಗೆಂದಳು. ೨೯. "ಕಲಿತ ವಿದ್ಯೆಯನ್ನು ಬಲ್ಲವರಿಗೆ ಕೇಳಿಸುವುದೇ ಅದಕ್ಕೆ ಸರಿಯಾದ ಫಲ. ನೀನು ಇದನ್ನರಿತು ಉಪೇಕ್ಷಿಸದೆ, ನಾಚದೆ, ಅಂಜದೆ, ಅಳುಕದೆ ಕಾವ್ಯದ ವಿವಿಧ ಮಾಧುರ್ಯವನ್ನು ಪ್ರಕಟಿಸು".

---

೫. (ಖ) ಖಮ್ಮೆ. ೬. (ಕ) ಕನ್ನಡ ಜಾಣೆ. ನೀ.

ಇಂತು ನುಡಿದ ರಾಣಿಯ ನುಡಿಗೇಳಿಯೋ
ರಂತೆ ಚಿತ್ತವ ಬಲಿವಿಡಿದು
ಸಂತಸ ಮಿಗೆ ಸಭೆಯೊಳು ರಾಯಗೆ ಮಾ
ರಾಂತು ಬಿನ್ನವಿಸಿದೆನಿಂತು ೩೦

ಆರಸ ಕೇಳೆನಗೆ ನಿನ್ನಡಿಯೂಳಿಗಮೊಂ
ದರಸಿಯರಡಿಯೊಲ್ಮೆಯೊಂದು
ಪರಿಕಿಪೊಡಖಿಳಾರ್ಥಸಾಧನಂಗಳಿಗಿವು
ನೆರವಾಗಿಹವು ನೇಮದೊಳು ೩೧

ನಿನ್ನಡಿಯೊಲವರಿತಿರ್ಪುದೆನಗೆ ಬಿಜ್ಜೆ
ನಿನ್ನೂಳಿಗವೆನ್ನ ಧರ್ಮ
ನಿನ್ನಾಣತಿಗೈವುದೆನ್ನ ಮನೋರಥ
ವೆನ್ನ ಭಾಗ್ಯಕ್ಕೆ ಸರಿಯುಂಟೆ ೩೨

ಪಲವೋದುಗಳಿಂದ ಪಲವು[1]ಗೈಮೆ[1]ಗಳಿಂದ
ಪಲ ಬಗೆವಾತುಗಳಿಂದ
ಬೆಲೆವಡೆದಿರ್ಪೆನೆಂದೆಣಿಸುವಳಲ್ಲ ನಿ
ನ್ನೊಲವೊಂದನೆ ನಂಬಿಹೆನು ೩೩

೩೦. ಹೀಗೆ ನುಡಿದ ರಾಣಿಯ ಮಾತನ್ನು ಕೇಳಿ ಮನಸ್ಸು ಗಟ್ಟಿ ಮಾಡಿಕೊಂಡು, ಆ ಸಭೆಯಲ್ಲಿ ಮಹಾರಾಜನಿಗೆ ಈ ರೀತಿಯಲ್ಲಿ ಪ್ರತಿಯಾಗಿ ವಿಜ್ಞಾಪಿಸಿದೆನು. ೩೧. "ಅರಸ, ಕೇಳು ; ನನಗೆ ನಿನ್ನ ಪಾದಸೇವೆಯೊಂದು, ಮಹಾರಾಣಿಯ ಪಾದಾನುಗ್ರಹವೊಂದು - ಇವೆರಡು ನನ್ನ ಎಲ್ಲ ಇಷ್ಟಾರ್ಥಸಾಧನೆಗೆ ನಿಶ್ಚಯವಾಗಿ ನೆರವಾಗಿವೆ. ೩೨. ನಿನ್ನ ಪಾದದ ಒಲವನ್ನು ಅರಿತಿರುವುದು ನನಗೆ ವಿದ್ಯೆ. ನಿನ್ನ ಸೇವೆ ನನಗೆ ಧರ್ಮ. ನಿನ್ನ ಆಜ್ಞೆ ಯನ್ನು ಪಾಲಿಸುವುದು ನನ್ನ ಮನೋರಥ. ಹೀಗಿರಲು ನನ್ನ ಭಾಗ್ಯಕ್ಕೆ ಎಣೆಯುಂಟೇ ? ೩೩. ಹಲವು ಬಗೆಯ ಓದುಗಳಿಂದಲೂ ಹಲವು ಕೃತಿಗಳಿಂದಲೂ ಮತ್ತು ಹಲವು ರೀತಿಯಲ್ಲಿ ಮಾತಾಡುವುದರಿಂದಲೂ ನಾನು ಗಣ್ಯಳಾಗಿದ್ದೇನೆಂದು ಎಣಿಸುವುದಿಲ್ಲ. ನಿನ್ನ ಅನುಗ್ರಹವೊಂದೇ ನಂಬಿದ್ದೇನೆ.

---

೭. (ಕ) ಬಿಜ್ಜೆ.

ನಿನ್ನ ಗುಣಂಗಳನೊಲಿದೋದುವುದೋದು
ನಿನ್ನಾಳ್ ಗೈಮೆಯೊಳ್ಸಿಮೆ
ನಿನ್ನೊಲವರಿತು ನುಡಿವ ನುಡಿ ನಲ್ನುಡಿ
ಯಿನ್ನಿವಕೆಣೆ ಬೇರುಂಟೆ ೩೪

ನಿನ್ನ ಕೃಪಾರಸದಿಂದ್ಯೆಸೆಯಾನು ಕ
ರ್ಬೊನ್ನು ಚೆಂಬೊನ್ನಾದಂತೆ
ಸನ್ನುತಿವಡೆದೊಳ್ಪುವೆತ್ತು ಸಕಲ ಭಾ
ಗ್ಯೋನ್ನತಿಯೊಡಗೂಡಿಹೆನು ೩೫

ನಿನ್ನಡಿ ಸೋಂಕಿನೊಳಖಿಲ ದುರಿತಗಳ
ಸನ್ನಾಹವ ಸದೆದಟ್ಟಿ
ಚೆನ್ನಗ ಚಿಕದೇವರಾಯನ ಸಂಚಿಯ
ಹೊನ್ನಿಯೆಂಬೇಳ್ಗೆವೆತ್ತಿಹೆನು ೩೬

ನಿನ್ನಾಣತಿಗೇಳಿ ನಿನ್ನ ಬಳಿಗೆ ಸಂದು
ನಿನ್ನೂಳಿಗಗಳನೆಸಗಿ
ನಿನ್ನವಳೆನಿಸಿ ನಿನ್ನೆಡೆವಿಡದಿರ್ಪೆನೀ
ಯುನ್ನತಿಗಿನ್ನೆಣೆಯುಂಟೆ ೩೭

ಆನಾವಳೆನ್ನ ಮುನ್ನಿರವಾವುದು ಮ
ತ್ತೀ ನಿನ್ನ ದಯವಾವುದಕಟ
ಏನೆಂಬೆನಿದಕೆ ಪೆಳವನೆಡೆಗಾ ಗಂಗೆ
ತಾನೈದೆ ಬಂದುದೆಂಬಂತೆ ೩೮

೩೪. ನಿನ್ನ ಗುಣಗಳನ್ನು ಓದುವುದೇ ನನಗೆ ಓದು. ನಿನ್ನ ಸೇವೆಯೇ ನನ್ನ ಸತ್ಕೃತಿ. ನಿನ್ನ ಒಲವನ್ನರಿತು ನುಡಿಯುವುದೇ ನಲ್ನುಡಿ. ಇವಕ್ಕೆ ಎಣೆ ಯಾದವು ಉಂಟೇ ? ೩೫. ಕಬ್ಬಿಣವು ಚಿನ್ನವಾದಂತೆ, ಅರಸ, ನಿನ್ನ ಕೃಪಾರಸದಿಂದಲೇ ನಾನು ಹೊಗಳಿಕೆಗೆ ಪಾತ್ರಳಾಗಿ ಒಳ್ಳೆಯ ಹೆಸರನ್ನು ಪಡೆದು ಸಕಲ ಭಾಗ್ಯಗಳಿಂದ ಕೂಡಿರುವೆನು. ೩೬. ನನ್ನ ಪಾದಸ್ಪರ್ಶದಿಂದ ಸಕಲ ಪಾಪಗಳನ್ನು ತೊಡೆದು ಹಾಕಿ, 'ಚೆನ್ನಿಗ, ಚಿಕ್ಕದೇವರಾಯನ ಸಂಚಿಯ ಹೊನ್ನಿ' ಎಂಬ ಕೀರ್ತಿಯನ್ನು ಪಡೆದಿದ್ದೇನೆ. ೩೭. ನಿನ್ನ ಅಪ್ಪಣೆಯನ್ನು ಕೇಳಿ ನಿನ್ನ ಬಳಿಗೆ ಬಂದು ನಿನ್ನ ಸೇವೆಗೈಯುತ್ತ ನಿನ್ನವಳೆನಿಸಿ ನಿನ್ನೊಡನೆಯೇ ಇರುವ ಈ ಔನ್ನತ್ಯಕ್ಕೆ ಎಣೆಯುಂಟೇ ? ೩೮. ನಾನು ಯಾವಳು ? ನಾನು ಹಿಂದೆ ಇದ್ದ ಸ್ಥಿತಿ ಯಾವುದು ? ಈ ನಿನ್ನ ದಯೆ ಯಾವುದು ? ಅಕಟ, ಇದಕ್ಕೆ ಏನು ಹೇಳಲಿ !

ಎನ್ನ ಜನ್ಮಕೆ ಸಾಫಲ್ಯಮಾದುದು ನಿನ್ನ
ಚೆನ್ನಡಿಯೂಳಿಗದಿಂದ
ಪಿನ್ನೇಳು ಮುನ್ನೇಳು ತರದವರನಿಬರು
ಮುನ್ನತಿವಡೆದರೆನ್ನಿಂದ ೩೯

ಆವ ಜನ್ಮದೊಳಾನಾವ ಸುಕೃತಗಳ
ನಾವ ಬಗೆಯೊಳೆಸಗಿದೆನು
ಈ ವಿಧದೇಳಿಗೆವಡೆದೀಯೊಡಲೊಳೆ
ದೇವರೂಳಿಗವೆಸಗುವೆನು ೪೦

ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ
ಪಲರು ಮುನ್ನಿನ ಬಾಂಧವರು
ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟ
ಫಲವ ಪಡೆದವರೆನ್ನಿಂದ ೪೧

ಸುತ್ತಣ ದೇಶದರಸಿಯರ ಬೈತಲೆ
ಗುತ್ತಮ ಭೂಷಣವೆನಿಪ
ಮುತ್ತಿನ ಸರವೆನ್ನ ರನ್ನವಾವುಗೆಗಳ
ಸುತ್ತ ಲಂಬಣಮಾದುದಿಂದು ೪೨

ಹೆಳವನೆಡೆಗೆ ಗಂಗೆಯೇ ಹರಿದುಬಂದಂತಾಗಿದೆ. ೩೯. ನಿನ್ನ ಚೆಲುವಿನ ಪಾದಗಳ ಊಳಿಗದಿಂದ ನನ್ನ ಜನ್ಮ ಸಫಲವಾಯಿತು. ನನ್ನ ಹಿಂದಿನ ಮತ್ತು ಮುಂದಿನ ಏಳು ತಲೆಗಳವರೆಗೆ ಎಲ್ಲರೂ ನನ್ನಿಂದ ಉನ್ನತಿಯನ್ನು ಪಡೆದರು. ೪೦. ಯಾವ ಜನ್ಮದಲ್ಲಿ ಯಾವ ಪುಣ್ಯಕಾರ್ಯಗಳನ್ನು ಯಾವ ಬಗೆಯಲ್ಲಿ ನಾನು ಆಚರಿಸಿದೆನೊ ! ಈ ವಿಧದಲ್ಲಿ ಏಳಿಗೆಯನ್ನು ಪಡೆದು ಈ ದೇಹದಿಂದಲೇ ಮಹಾರಾಜರ ಊಳಿಗವನ್ನು ನಡೆಸುತ್ತಿದ್ದೇನೆ. ೪೧. ತನ್ನ ಸೋದರಿ, ಸೊಸೆ, ಮಗಳು ಎಂಬುದಾಗಿ ಹಿಂದಿನ ಬಂಧುಗಳು ನನ್ನನ್ನು ಕುಲದೇವತೆಯೆಂದು ಒಲಿದು ಪ್ರೀತಿಸಿ ತಮ್ಮ ಇಷ್ಟಾರ್ಥಗಳನ್ನು ನನ್ನಿಂದ ಪಡೆಯುತ್ತಿದ್ದಾರೆ. (ಇಂತಹ ಭಾಗ್ಯವು, ಮಹಾರಾಜ, ನಿನ್ನಿಂದ ನನಗೆ ಬಂದಿತು.) ೪೨. ಸುತ್ತಲೂ ಇರುವ ದೇಶಗಳ ರಾಣಿಯರ ಬೈತಲೆಗೆ ಅಲಂಕಾರವಾದ ಮುತ್ತಿನ ಸರವು, ಇಂದು, ನನ್ನ ಮಣಿಪಾದುಕೆಗಳನ್ನು ಸುತ್ತುವರಿವ ಮಾಲೆಯಾಗಿದೆ ![೧]

---

೧. ಚಿಕ್ಕದೇವರಾಯನು ಎಡಬಲದ ರಾಜರನ್ನು ಗೆದ್ದು ವಶಪಡಿಸಿಕೊಂಡಿರುವುದರಿಂದ ಆ ರಾಜನ ಮಡದಿಯರು ತಮ್ಮ ಕಾರ್ಯಸಾಧನೆಗಾಗಿ ಹೊನ್ನಮ್ಮನ ಕಾಲುಗಳಿಗೆ ನಮಸ್ಕರಿಸುತ್ತಿದ್ದಾರೆ ಎಂದು ಅಭಿಪ್ರಾಯ.

ಏವೇಳುವೆನೆನ್ನ ಮನದಾನಂದವ
ನಾವ ಬಗೆಯೊಳರುಹುವೆನು
ಭಾವಿಸೆ ಸೊಗದ ಸುಗ್ಗಿಯ ತನಿಸೊಕ್ಕೆನ್ನ
ನಾವರಿಪುದು ಮತ್ತೇವೆ ೪೩

ಒಡೆಯನಿರಿಸಿದಂತಿರ್ಪುದಲ್ಲದೆ ಪೇ
ಳೊಡವೆಗೆ ಬೇರಿರವುಂಟೆ
ಕಡುಗೂರ್ಮೆಯಿಂದ ನಿನ್ನಡಿಯಾಣತಿಯನೆನ್ನ
ಮುಡಿಯೊಳಾಂತೆನು ಮತ್ತೇನು ೪೪

ಆದೊಡಮೆನ್ನ "ಕವಿತೆಗ"ಬ್ಬದ ಬಗೆ
ಈ ದಿವ್ಯಸಭೆಗೆ ಸಂಗತಮೆ
ಪಾದದೂಳಿಗದೊಳು ಬಳೆದ ಬಾಲಕಿಯೆಂ
ದಾದರದಿಂದಾಲಿಪುದು ೪೫

ಪದಿನೆಂಟು [ಬಣ್ಣನೆ]ಯೆಂದು ಬವಣೆಗೊಂಡು
ಪದಗೆಟ್ಟು ಬಯಲ ಬಣ್ಣಿಸದೆ
ಮುದದೊಡನಿಹಪರದೇಳ್ಗೆವಡೆಯೆ ಹದಿ
ಬದೆಯ ಧರ್ಮವ ಬಣ್ಣಿಪೆನು ೪೬

೪೩. ನನ್ನ ಮನಸ್ಸಿನ ಆನಂದವನ್ನು ಏನೆಂದು ಹೇಳಲಿ ! ಯಾವ ಬಗೆಯಲ್ಲಿ ತಿಳಿಸಲಿ ! ವಿಚಾರಮಾಡಿದರೆ ಸುಖದ ಸುಗ್ಗಿಯ ಸೊಕ್ಕು ನನ್ನನ್ನು ಆವರಿಸಿದೆ, ಏನು ಮಾಡಲಿ ? ೪೪. ಮಹಾರಾಜ, ಒಡೆಯನು ತನ್ನ ವಸ್ತುವನ್ನು ಎಲ್ಲಿ ಹೇಗೆ ಇರಿಸುವನೋ ಅಲ್ಲಿ ಹಾಗೇ ಇರಬೇಕಲ್ಲದೆ ಅದಕ್ಕೆ ಬೇರೆ ಸ್ಥಿತಿಯುಂಟೆ ? ಹೇಳು. ನಿನ್ನ ಪಾದಸೇವೆಯಲ್ಲಿ ಬೆಳೆದ ಬಾಲಕಿಯೆಂದು ತಿಳಿದು ಇದನ್ನು ಆದರದಿಂದ ಆಲಿಸಬೇಕು. ೪೬. (ಕಾವ್ಯದಲ್ಲಿ) ಹದಿನೆಂಟು ಬಗೆಯ ವರ್ಣನೆಗಳಿರಬೇಕೆಂದು ಬವಣೆಗೆ ಸಿಕ್ಕಿ ದಾರಿದಪ್ಪಿ, (ನಿರರ್ಥಕವಾದ) ಬಯಲನ್ನು ಬಣ್ಣಿಸಲಾರೆ ! ಇಹಪರದ ಏಳ್ಗೆಗೆ ಸಾಧಕವಾದ ಪತಿವ್ರತಾಧರ್ಮವನ್ನು ಸಂತೋಷದಿಂದ ಬಣ್ಣಿಸುವೆನು.

---

೮. (ಕ) ಕವಿದಗೆ.

ಅರಸಿಯರನಿಬರುಮಾದರದಿಂದೆನ್ನ
ಸರಸಕಾವ್ಯವ ಸವಿವಂತೆ
ಪರಮ ಪತಿವ್ರತೆಯರ ನಡತೆಯನಿಲ್ಲಿ
ಪುರುಳುಗೊಳಿಸಿ ಪೊಗಳುವೆನು ೪೭

ಧರ್ಮದ ತನಿಗಂಪು ತಲೆದೋರೆ ಕಾವ್ಯದ
ಪೆರ್ಮೆ ಬೇರ್ವರಿದು ಬಿತ್ತರಿಸೆ
ನಿರ್ಮಲ ಸತಿಯರ ಧರ್ಮವ ವೃತ್ತಿಯಾಗಿ
ನಿರ್ಮಿಸಿ 'ನೆಗಳಿಪ'ನಿಂದು ೪೮

ಬಲ್ಲರಿಂದಾನು ಕೇಳಿದುದಕೆ ಪೆರ್ಚು ಕುಂ
ದಿಲ್ಲದಂತೆಚ್ಚರುಗೂಡಿ
ಎಲ್ಲರುಮರಿವಂತೆಳವಾತುಗಳಿಂದ
ಸೊಲ್ಲಿಸುವೆನು ಸೊಗಸುವೊಲು ೪೯

ಎಂದ ನುಡಿಯ ರಾಯನುಮರಸಿಯರುಮಾ
ನಂದವಡೆದು ಬಗೆಗೊಳಿಸೆ
ಸಂತ ಸತೀಧರ್ಮವನು ಸಾಹಿತ್ಯದೊ
ಳೊಂದುಗೊಳಿಸಿ ಪೇಳಿದೆನು ೫೦

೪೭. ಎಲ್ಲ ರಾಣಿಯರೂ ನನ್ನ ಸರಸಕಾವ್ಯವನ್ನು ಆದರದಿಂದ ಸವಿಯುವಂತೆ ಪರಮ ಪತಿವ್ರತೆಯರ ನಡತೆಯನ್ನು ಇದರಲ್ಲಿ ಅರ್ಥವತ್ತಾಗಿ ವರ್ಣಿಸುವೆನು. ೪೮. ಧರ್ಮದ ಮಧುರ ಸುಗಂಧವು ತಲೆದೋರುವಂತೆ, ಕಾವ್ಯದ ಹಿರಿಮೆ ಬೇರ್ವರಿದು ವಿಸ್ತರಿಸುವಂತೆ, ಪರಿಶುದ್ಧರಾದ ಸಾಧ್ವಿಯರ ಧರ್ಮವನ್ನು ಕಾವ್ಯವಾಗಿ ನಿರ್ಮಿಸಿ ಕೀರ್ತಿಪಡೆಯುವೆನು. ೪೯. ಬಲ್ಲವರಿಂದ ನಾನು ಏನನ್ನು ಕೇಳಿ ತಿಳಿದಿದ್ದೆನೋ ಅದಕ್ಕೆ ಆಧಿಕ್ಯವಾಗಲಿ ನ್ಯೂನತೆಯಾಗಲಿ ಬರದಂತೆ ಎಚ್ಚರಿಕೆಯನ್ನು ವಹಿಸುತ್ತೇನೆ. ಎಲ್ಲರಿಗೂ ತಿಳಿಯುವಂತೆ ತಿಳಿಮಾತುಗಳಿಂದ ಸೊಗಸಾಗಿ ಹೇಳುವೆನು. ೫೦. ಹೀಗೆ ಹೇಳಲು ಆ ಮಾತನ್ನು ಮಹಾರಾಜನೂ ಅರಸಿಯರೂ ಸಂತೋಷದಿಂದ ಒಪ್ಪಿದರು. (ಅನಂತರ) ಪ್ರಸಿದ್ಧವಾದ ಪತಿವ್ರತಾಧರ್ಮವನ್ನು ಕಾವ್ಯದಲ್ಲಿ ಸಂಗ್ರಹಿಸಿ ಹೇಳಿದೆನು.

---

೯. (ಕ) ಕೇಳಿಪೆ.

ಆದಿಕಾವ್ಯದೊಳೈದನೆಯ ವೇದದೊಳು ಮ
ನ್ವಾದಿಕ ಧರ್ಮಶಾಸ್ತ್ರದೊಳು
ಭೇದಿಸಿ ಪಿರಿಯರು ಪೇಳಿದುದನೆ ಕೃತಿ
ಗೈದಾನು ಕಿವಿಗೊಳಿಸಿದೆನು ೫೧

ಸತಿಯರೀ ಕೃತಿಯನಾಲಿಸಿದೊಡಂದಂದಿಗೆ
ಪತಿಭಕ್ತಿ ಬಣ್ಣವೇರುವುದು
ಮತಿ ಮಸುಳಿಸದೆ ಮರವೆದೋರದಿಹ ಪರ
ದತಿಶಯವನುಗೂಡುವುದು ೫೨

ಎಳವೆಣ್ಗಳೀ ಕೃತಿಗೇಳೆ ತಮ್ಮಿನಿಯರ
ನೆಳಮೆಯೊಳಳವುಗೆಡಿಸದೆ
ಬಳಿಸಂದು ಬಾಳುವರತ್ತೆಮಾವಂದಿರ
ನೊಳ[10]ವು[10] ಗೈದೊಳ್ಪುವಡೆವರು ೫೩

ಮನೆವಾಳ್ತೆಯರಿಯದ ಮರುಳುವೆಣ್ಣೀ ಕೃತಿ
ಯನೆ ಮನಮೊಲಿದೋದಿದೊಡೆ
ಜನರಿವಳನು ಪೋಲ್ವ ಜಾಣೆ ಜಗದೊಳಿ
ಲ್ಲೆನೆ ಚಾತುರ್ಯವಡೆವಳು ೫೪

೫೧. ಆದಿಕಾವ್ಯವೆನಿಸಿದ ರಾಮಾಯಣ, ಐದನೆಯ ವೇದವೆನಿಸದ ಮಹಾಭಾರತ ಮತ್ತು ಮನ್ವಾದಿಗಳು ಬರೆದ ಧರ್ಮಶಾಸ್ತ್ರ - ಇವುಗಳ ಒಳಹೊಕ್ಕು ಹಿರಿಯರು ಏನು ಹೇಳಿದ್ದಾರೋ ಅದನ್ನು ಕೃತಿರೂಪಕ್ಕೆ ತಂದು (ನಿಮ್ಮ) ಕಿವಿಗೆ ಹಾಕಿದ್ದೇನೆ. ೫೨. ಈ ಕೃತಿಯನ್ನು ಮಡದಿಯರು ಕೇಳಿದರೆ ಅವರ ಪತಿಭಕ್ತಿ ಹೆಚ್ಚುವುದು, ಬುದ್ಧಿಶಕ್ತಿಯು ಮಾಸದು, ವಿಸ್ಮೃತಿ ತಲೆದೋರದು, ಇಹಪರಗಳ ಸಾಧನೆಯಲ್ಲಿ ಅತಿಶಯ ಉಂಟಾಗುವುದು. ೫೩. ಚಿಕ್ಕವಯಸ್ಸಿನ ಹೆಣ್ಣುಗಳು ಈ ಕಾವ್ಯವನ್ನಾಲಿಸಿದರೆ, ಅವರು ತಮ್ಮ ಇನಿಯರನ್ನು ಅವರ ಚಿಕ್ಕವಯಸ್ಸಿನಲ್ಲಿ ಎದೆಗುಂದಿಸದೆ ಅವರ ಬಳಿಯಲ್ಲಿ ಒಳ್ಳೆಯ ಬಾಳ್ವೆಯನ್ನು ನಡೆಸುವರು. ಅತ್ತೆಮಾವಂದಿರಿಗೆ ಅನುಕೂಲರಾಗಿದ್ದು ತಾವೂ ಶ್ರೇಯಸ್ಸನ್ನು ಪಡೆಯುವರು. ೫೪. ಮನೆಗೆಲಸವನ್ನರಿಯದ ದಡ್ಡ ಹುಡುಗಿಯೂ ಸಹ ಈ ಕೃತಿಯನ್ನು ಆದರವಿಟ್ಟು ಓದಿದಲ್ಲಿ, 'ಇವಳನ್ನು ಹೋಲುವ ಜಾಣೆ ಜಗತ್ತಿನಲ್ಲೇ

---

೧೦. (ಖ) ಗು.

ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಖಿಪ
ಮೊನೆಗಾತಿಯಾ ಕೃತಿಗೇಳೆ
ಇನಿಯನ ಮೊಗವ ನೋಡದ ಮುನ್ನ ಮೋಹಿಸಿ
ಮನಗರಗುವಳು ಮತ್ತೇನು ೫೫

ಕಡುನಾಣ್ಚಿಯಂಜಿ ಕಣ್ಮುಚ್ಚಿ ಕಂಪನಗೊಂಬ
[೧೧]ಬಡವೆಣ್ಗಳೀ[೧೧] ಕೃತಿಗೇಳೆ
ಎಡಬಲದವರೇಳಿಸದಂತೆ ಮನದನ್ನ
ರೊಡನೆ ಬಾಳುವರಡಕದೊಳು ೫೬

ಬಗೆಯ ಮೈಲಿಗೆಯೆಂಜಲೆಂಬುದನರಿಯದ
ಮುಗುದೆಯರೀ ಕೃತಿಗೇಳೆ
ನಿಗಮದೊಳೊಗೆದ ನೇಮಂಗಳ ತಿಳಿದೀ
ಜಗಕೆ ಪಾವನೆಯರೆನಿಪರು ೫೭

ಅತ್ತೆನಾದಿನಿಯರೊಳಳುಕದ ಕಾದುವು
ನ್ಮತ್ತೆಯರೀ ಕೃತಿಗೇಳೆ
ಉತ್ತಮ ಗುಣಗಳಿಂದೊಳಗುಗ್ಗೈದವರೊಳು
ಪತ್ತುಗೆವೆರಸಿ ಬಾಳುವರು ೫೮

ಇಲ್ಲ' ಎಂದು ಜನರು ಹೊಗಳುವಂತಹ ಜಾಣ್ಮೆಯನ್ನು ಪಡೆಯುವಳು. ೫೫. ಯಾವಳಾದರೂ ಜಗಳಗಂಟಿಯಾದ ಮೂರ್ಖಳು ಮುನಿದು ಮೂದಲಿಸಿ ಬಿಗುಮಾನದಲ್ಲಿದ್ದರೂ ಈ ನನ್ನ ಕಾವ್ಯವನ್ನು ಕೇಳಿದಲ್ಲಿ, ಇನಿಯನ ಮುಖವನ್ನು ನೋಡದ ಮೊದಲೇ ಅವನನ್ನು ಪ್ರೀತಿಸಿ ಪಶ್ಚಾತ್ತಾಪದಿಂದ ಮನಗರಗುವಳು. ಇನ್ನೇನು ಹೇಳಲಿ ! ೫೬. ಬಹಳ ನಾಚಿಕೆಯಿಂದ ಅಂಜಿ ಕಣ್ಮುಚ್ಚಿ ನಡುಗುವ ಅಬಲೆಯರು ಈ ಕೃತಿಯನ್ನು ಕೇಳಿದಾಗ, ಅವರು ಎಡಬಲದವರ ನಿಂದೆಗೆ ಗುರಿಯಾಗದಂತೆ ತಮ್ಮ ಪ್ರಿಯರೊಡನೆ ಒಪ್ಪವಾಗಿ ಬಾಳುವರು. ೫೭. 'ಇದು ಮೈಲಿಗೆ, ಇದು ಎಂಜಲು' ಎಂಬುದನ್ನರಿಯದ ಮುಗ್ಧೆಯರು ಈ ಕಾವ್ಯವನ್ನಾಲಿಸಿದಲ್ಲಿ, ಶಾಸ್ತ್ರದಲ್ಲಿರುವ ನೀತಿ ನಿಯಮಗಳನ್ನರಿತು ಜಗತ್ತಿಗೆ ಪಾವನೆಯೆನಿಸುವರು. ೫೮. ಅತ್ತೆನಾದಿನಿಯರಿಗೆ ಹೆದರದೆ ಜಗಳವಾಡುವ ಉನ್ಮತ್ತರಾದ ಮಡದಿಯರು ಈ ಕೃತಿಯನ್ನು ಕೇಳಿದರೆ, ಉತ್ತಮ ಗುಣಗಳನ್ನು ಪಡೆದು ಒಳ್ಳೆಯವರೆನಿಸಿ ಅವರೊಡನೆ ಒಪ್ಪವಾಗಿ ಬಾಳುವರು.

---

೧೧. (ಕ) ಎಡವೆಣ್ಗಳೀ, (ಗ) ಮಡದಿಯರೀ.

ಒರ್ವರೊರ್ವರೊಳು ಮಚ್ಚರಿಸುವ ಸವತಿಯ
ರಿರ್ವರುಮೀ ಕೃತಿಗೇಳೆ
ಬೇರ್ವರಿದಿರ್ಪ ವೈರದ ಬೇರ ಪರಿದಿ
ಟ್ಟಿರ್ವರೊಂದೆನಿಸಿಯೊಪ್ಪುವರು ೫೯

ಇದು ಪಾತಿವ್ರತ್ಯಧರ್ಮತತ್ವದ ಸಾರ
ವಿದೆ ಸಂಜೀವನ ಮಂತ್ರ
ಇದು ಪರಮಾರ್ಥ ಹಿತೋಪದೇಶದ ತಿರು
ಳಿದನು ಸತಿಯರೋದುವುದು ೬೦

ಇದನಾಲಿಪುದೊಳ್ವೆಂಡಿರೀ ಧರ್ಮದ
ಪದನರಿತಾಚರಿಸುವುದು
ಇದನು ಕಲಿವುದಿದರೊಳಗರಿವುದು ಹದಿ
ಬದೆಯರೆನಿಸಿ ಬಾಳುವುದು ೬೧

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಉನ್ನತಿವಡೆದೊಗೆದುದು ಪೀಠಿಕಾಸಂಧಿ
ಸನ್ನುತಗುಣಸಂಬಂಧಿ ೬೨

೫೯. ಒಬ್ಬರನ್ನೊಬ್ಬರು ದ್ವೇಷಿಸುವ ಸವತಿಯರಿಬ್ಬರೂ ಈ ಕೃತಿಯನ್ನು ಕೇಳಿದಲ್ಲಿ, ದೃಢಮೂಲವಾದ ತಮ್ಮ ವೈರದ ಬೇರನ್ನೇ ಹರಿದು ಅವರಿಬ್ಬರೂ ಒಂದಾಗುವರು. ೬೦. ಇದು ಪತಿವ್ರತಾ ಧರ್ಮತತ್ತ್ವದ ಸಾರ. ಇದು ಸಂಜೀವನ ಮಂತ್ರ. ಪರಮಾರ್ಥಕ್ಕೆ ಅನುಕೂಲವಾದ ಹಿತೋಪದೇಶದ ತಿರುಳು. ಮಡದಿಯರು ಇದನ್ನು ಓದಬೇಕು. ೬೧. ಒಳ್ಳೆಯ ಪತ್ನಿಯರೆನಿಸಿ ಬಾಳತಕ್ಕವರು ಈ ಕಾವ್ಯವನ್ನು ಆಲಿಸಬೇಕು. ಧರ್ಮದ ರಹಸ್ಯವನ್ನರಿತು ಆಚರಿಸಬೇಕು. ಇದನ್ನು ಅಭ್ಯಾಸಮಾಡಿ ಇದರೊಳಗಿನ ತಿರುಳನ್ನು ತಿಳಿಯಬೇಕು. ಒಟ್ಟನಲ್ಲಿ ಪತಿವ್ರತೆಯರೆನಿಸಿ ಬಾಳಬೇಕು. ೬೨. ಚೆನ್ನಿಗ ಚಿಕದೇವರಾಯನ ಸಂಚಿಯ ಹೊನ್ನಮ್ಮನು ರಚಿಸಿದ ಕಾವ್ಯದಲ್ಲಿ ಶ್ಲಾಘನೀಯ ಗುಣಯುಕ್ತವಾದ ಪೀಠಿಕಾಸಂಧಿಯನ್ನು ಉನ್ನತರೀತಿಯಲ್ಲಿ ಸಮಾಪ್ತವಾಯಿತು.

# ಎರಡನೆ ಸಂಧಿ

ಮಂಗಳಗುಣಗಣನಿಧಿಗೆ ನಿರ್ಮಲನಿಗು
ತ್ತುಂಗ ಮಹಿಮಗೆ ಮಾಧವಗೆ
ಸಂಗತಜನಸರ್ವಫಲದಗೆ ಪಶ್ಚಿಮ
ರಂಗಧಾಮನಿಗೆರಗುವೆನು ೧

ಇಂಗೋಲನ ತಾಯಿಗಿಂಗದಿರನ ತಂಗಿ
ಗಿಂಗಡಲಣುಗಿಗಿಂದಿರೆಗೆ
ರಂಗಧಾಮನ ರಾಣಿಗೆ ರಾರಾಜಪ
ರಂಗನಾಯಕಿಗೆರಗುವೆನು ೨

ಪತಿಯೊಳು ಪರಭಕ್ತಿಗೈವುದು ಲಕ್ಷ್ಮೀ
ಪತಿಯಾಣತಿಯೆಂದು ಬಗೆದು
ಪತಿಯನೆ ಪರದೇವತೆಯೆಂದು ಭಜಿಸುವ
ಸತಿಯ ಸನ್ನುತಿಸುವೆನು ೩

ಪತಿಭಕ್ತಿಯೊಂದು ಶ್ರೀಪತಿಭಕ್ತಿಯೊಂದಿದ
ರತಿಶಯಕಿನ್ನೆಣೆಯಿಲ್ಲ
ಮತಭೇದವುಂಟು ಮಾದವಭಕ್ತಿಗಿದಕಾ
ಮತಭೇದವೂ [1]ಮಗುಳಿ[1]ಲ್ಲ ೪

೧. ಮಂಗಳಗುಣ(ಗಳ) ಸಾಗರನೂ ನಿರ್ಮಲನೂ ಉತ್ತುಂಗ ಮಹಿಮನೂ ಲಕ್ಷ್ಮೀಪತಿಯೂ ಶರಣಾಗತರಾದ ಭಕ್ತರ ಅಭೀಷ್ಟಗಳಿಗೆ ಫಲ ಕೊಡುವವನೂ ಪಶ್ಚಿಮ ರಂಗನಿವಾಸನೂ ಆದ ಶ್ರೀರಂಗನಾಥಸ್ವಾಮಿಗೆ ನಮಸ್ಕರಿಸುತ್ತೇನೆ. ೨. ಮನ್ಮಥನ ತಾಯಿಯೂ ಚಂದಿರನ ತಂಗಿಯೂ ಕ್ಷೀರಸಮುದ್ರನ ಮಗಳೂ ಶ್ರೀರಂಗನಾಥನ ರಾಣಿಯೂ ಲಕ್ಷ್ಮೀಸ್ವರೂಪಳೂ ಆದ ರಂಗನಾಯಕಿಗೆ ವಂದಿಸುತ್ತೇನೆ. ೩. ಗಂಡನಲ್ಲಿ ಅತಿಶಯವಾದ ಭಕ್ತಿಯಿಂದ ನಡೆದುಕೊಳ್ಳುವುದು ಲಕ್ಷ್ಮೀಪತಿಯ ಆಜ್ಞೆ ಎಂದು ತಿಳಿದು ತಮ್ಮ ತಮ್ಮ ಗಂಡಂದಿರನ್ನು ದೇವರೆಂದು ಭಜಿಸುವ ಪತಿವ್ರತೆಯನ್ನು ತುಂಬು ಮನಸ್ಸಿನಿಂದ ಹೊಗಳುತ್ತೇನೆ. ೪. ಪತಿಭಕ್ತಿಗೆ ಮತ್ತು ಶ್ರೀಪತಿಯ ಭಕ್ತಿಗೆ ಸಮನಾದದ್ದು ಬೇರೆ ಯಾವುದೂ ಇಲ್ಲ. ಲಕ್ಷ್ಮೀಪತಿಯ ಭಕ್ತಿಯ ಆಚರಣೆಯ ವಿಧಾನದಲ್ಲಿ ಮತ(ಅಭಿಪ್ರಾಯ)ಭೇದವಿದೆ. ಆದರೆ ಪತಿಭಕ್ತಿಯಲ್ಲಂತೂ

---

೧. (ಖ) ಮರುಳಿ.

ಆದರದೊಡನಂತರಂಗದೊಳಾಣ್ಮನ
ಪಾದವ ಭಜಿಪ ಭಾವೆಯರ
ಪಾದಧೂಳಿಗಳಿಂದೆ ಪಾವನವಹುದೀ
ಮೇದಿನಿಯೆನೆ ಮಿಕ್ಕುದೇನು ೫

ಪತಿತರ ಪಾವನವೆನಿಸುವ ಬಲ್ಮೆಯೊ
ಳತಿಶಯವಡೆದ ತೀರ್ಥಗಳು
ಸತಿಯರ ಪಾದಸಂಸ್ಪರ್ಶದಿಂ ತಮ್ಮ ದು
ಷ್ಕೃತವ ಕಳೆಯಲೆಳಸುವುವು ೬

ತಡೆಯದೆಲ್ಲೆಡೆಯೊಳು ತಾನು ಬೀಸುವೆನೀ
ಯೆಡರನೇಳಿಪೆನೆಂದೆಲರು
ಸಡಗರದಿಂದ ಸಾಧ್ವಿಯರಡಿಸೋಂಕಿದ
ಪುಡಿಯ ಮುಡಿಯೊಳಾನುವುದು ೭

ತೇಜಿಗಳೆಡಹದೆ ತೇರುಡಿಯದೆ ತ
ನ್ನೋಜೆಯುಡುಗದೆ ಭಾಸ್ಕರನು
ಈ ಜಾತಿಸಾಧ್ವಿಯರೆಸಕದೇಳಿಗೆಯಿಂದ
ತೇಜವಡೆದು ತಿರುಗುವನು ೮

ಯಾವ ಭೇದವೂ ಇಲ್ಲ. ಇದು ಅದ್ವಿತೀಯವಾದುದು. ೫. ಗೌರವದಿಂದ ಅಂತರಂಗ ದಲ್ಲಿ ಗಂಡನ ಪಾದಗಳನ್ನು ಭಜಿಸುವ ಸ್ತ್ರೀಯರ ಪಾದಗಳ ಧೂಳಿನಿಂದ ಈ ಭೂಮಿ ಪವಿತ್ರವಾಗಿದೆ ಎಂದ ಮೇಲೆ, ಮತ್ತೇನು ತಾನೆ ಹೇಳಲು ಸಾಧ್ಯ ? ೬. ಪಾಪಿಗಳನ್ನು ಪರಿಶುದ್ಧಗೊಳಿಸುವಂಥ ಶಕ್ತಿ ಪಡೆದ ಪಾವನತೀರ್ಥಗಳು ಇಂಥ ಪತಿವ್ರತಾಸ್ತ್ರೀಯರ ಪಾದಸ್ಪರ್ಶದಿಂದ ತಮ್ಮ ದುಷ್ಕೃತಗಳನ್ನು ಕಳೆದುಕೊಳ್ಳುತ್ತವೆ. ೭. ಯಾವ ಅಡ್ಡಿಯೂ ಇಲ್ಲದೆ ಎಲ್ಲ ಸ್ಥಳಗಳಲ್ಲಿ ನಾನು ಬೀಸುತ್ತೇನೆ, ಇದರಿಂದ ನನಗೆ ಕಷ್ಟದ ಪಾಪದ ಸೋಂಕು ತಗಲುತ್ತದೆ ; ಅದನ್ನು ನಿವಾರಿಸಿಕೊಳ್ಳಬೇಕು - ಎಂದು ಗಾಳಿ (ವಾಯು) ಅತ್ಯಂತ ಉತ್ಸಾಹದಿಂದ ಪತಿವ್ರತೆಯರ ಪಾದಗಳ ಧೂಳನ್ನು ತನ್ನ ತಲೆಯ ಮೇಲೆ ಧರಿಸಿಕೊಳ್ಳುತ್ತದೆ ! ೮. ಸೂರ್ಯನ ರಥದ ಕುದುರೆಗಳು ಮುಗ್ಗರಿಸದೆ ಮುಂದುವರಿ ಯುವುದು, ಅವನ ರಥ ಮುರಿಯದೆ ಇರುವುದು, ಅವನ ಮಾರ್ಗಕ್ರಮ ತಪ್ಪದೆ ನೇರ ವಾಗಿರುವುದು. ಪತಿವ್ರತೆಯರ ಕರ್ಮದ ಉನ್ನತಿಯಿಂದ - ಎಂದು ಅವನು ಅರಿತಿರು ವುದರಿಂದ ಸೂರ್ಯನು ತನ್ನ ತೇಜಸ್ಸನ್ನು ಕಳೆದುಕೊಳ್ಳದೆ ಹೆಚ್ಚು ಪ್ರಕಾಶ ಪಡೆದು

ಮಳೆಗರೆವುದು ಬೆಳೆ ಪೆರ್ಚುವುದಿಳೆ ತಳ
ಕಿಳಿದು ಪೋಗಲದೆ ತಡೆದಿಹುದು
ಪಳಿವಿಲ್ಲದ ಪತಿವ್ರತೆಯರ ನಡತೆಯ
[೨]ಬಳದೊಳೆ[೨]ಂಬರು ಬಲ್ಲವರು ೯

ಪರಮ ಪತಿವ್ರತೆಯರ ಪಾದದರ್ಶನ
ದೊರೆಕೊಂಡುದೆ ಪುಣ್ಯದಿವಸ
ಪರದಿರವನು ಬಲ್ಲವರೆ ಭೂಪ್ರದಕ್ಷಿಣ
ದಿರವನ್ನಿನ್ನೇವಣ್ಣಿಪೆನು ೧೦

ತನ್ನಿನಿಯನ ತಾಯ್ ತಂದೆಯ ಕುಲಗಳ
ನುನ್ನತಿಯಗೈದೊಪ್ಪುವಡೆದು
ಮನ್ನಣೆವೆತ್ತ ಸಾಧ್ವಿಯರ ಮಹಿಮೆಗಳ
ಸನ್ನುತಿಸುವಡೆನ್ನಳವೆ ೧೧

ಈ ಸುಚರಿತ್ರೆಯರೆಸಗಿದನ್ನವನುಣ
ಲಾಸೆವಡುವರು ಪಿತೃಗಳು
ಆ ಸುಖ ದೊರೆಕೊಂಡೊಡವರಿಗಪ್ಪುದು ತೃಪ್ತಿ
ಸಾಸಿರ ಬರಿಸ ಪರ್ಯಂತ ೧೨

ಓಡಾಡುತ್ತಾನೆ. ೯. ಕಾಲಕಾಲಕ್ಕೆ ಮಳೆ ಬೀಳುವುದು, ಸಮೃದ್ಧಿಯಾಗಿ ಬೆಳೆ ಬರುವುದು, ಭೂಮಿ ಕೆಳಗೆ ಬೀಳದೆ ಇರುವುದು ಯಾವ ದೋಷವೂ ಇಲ್ಲದ ಪತಿವ್ರತೆಯರ ಸಚ್ಚಾರಿತ್ರ್ಯದ ಬಲದಿಂದ - ಎಂದು ತಿಳಿದವರು ಹೇಳುತ್ತಾರೆ. ೧೦. ಎಂದು ಪತಿವ್ರತೆಯರ ಪೂಜ್ಯ ಪಾದಗಳ ದರ್ಶನವಾಗುತ್ತದೋ ಅಂದೇ ಪುಣ್ಯ ದಿವಸ. ಅವರಿಗೆ ಪ್ರದಕ್ಷಿಣೆ ಬಂದರೆ ಅದು ಭೂ ಪ್ರದಕ್ಷಿಣೆಯಷ್ಟು ಪುಣ್ಯ ಕರ್ಮ. ಹೀಗಿರಲು ಅವರ ಮಹಿಮೆಯನ್ನು ನಾನು ಏನೆಂದು ವರ್ಣಿಸಬಹುದು ? ೧೧. ತನ್ನ ಪ್ರಿಯನ (ಸತಿಯ) ತಂದೆ, ತಾಯಿಗಳ ವಂಶಗಳಿಗೆ ಕೀರ್ತಿತರುವಂತೆ ನಡೆದು, ಗೌರವವನ್ನು ಸಂಪಾದಿಸಿದ ಪತಿವ್ರತೆಯರ ಮಹಿಮೆಗಳನ್ನು ವರ್ಣಿಸುವುದು ನನ್ನ ಸಾಮರ್ಥ್ಯಕ್ಕೆ ಮೀರಿದ್ದು. ೧೨. ಇಂಥ ಸಾಧ್ವಿಯರು ಮಾಡಿದ ಅಡುಗೆಯನ್ನು ಊಟ ಮಾಡಲು ಪಿತೃಗಳು ಆಸೆಪಡುತ್ತಾರೆ. ಅಂಥ ಭೋಜನದ ಸುಖ ಅವರಿಗೆ ಲಭಿಸಿದರೆ ಅವರಿಗೆ

---

೨. (ಕ, ಗ) ಬಳದಿಂದೆ.

ಸತಿಯರ ಕೈ ಸೋಂಕಿದನ್ನವ ಸವಿವುದ
ರತಿಶಯವಾಡಲೆನ್ನಳವೆ
ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ
ವ್ರತನಿಯಮದ ಪವಣಲ್ಲ ೧೩

ಇವರಿದ್ದೆಡೆ ಪುಣ್ಯತೀರ್ಥ ಪುಣ್ಯಕ್ಷೇತ್ರ
ವಿವರಿದ್ದ ಮನೆ ದೇವಭವನ
ಇವರೆ ಪ್ರತ್ಯಕ್ಷ ದೇವತೆಯರು ದಿಟವೆಂದು
ವಿವರಿಸುವರು ವೇದವಿದರು ೧೪

ಉದಯಕಾಲದೊಳೆದ್ದೊಲಿದಷ್ಟದೈವದ
ಪದಗಳ ಪಾಡುವಂದದೊಳು
ಪದಿಬದೆಯರ ಪೆಸರ್ಗೊಂಡು ಪೊಗಳ್ವುದು
ವಿದಿತವೈಸಲೆ ವೈದಿಕರಿಗೆ ೧೫

ಪತಿಯ ಪಾದಾಬ್ಜಭಕ್ತಿಯೆ ತಮಗಿಹಪರ
ಗತಿಯೆಂದು ಕಡುವಿಡಿದಿರ್ಪ
ಸತಿರಿರ್ಪೆಡೆಯೊಳು ಕೃತಯುಗಮೊಂದಲ್ಲ
ದಿತರಯುಗಕ್ಕಿಂಬಿಲ್ಲ ೧೬

ಸಾವಿರ ವರ್ಷದವರೆಗೆ ತೃಪ್ತಿ. ೧೩. ಸಾಧ್ವಿಯರ ಕೈ ಸೋಂಕಿದ ಅನ್ನದ ರುಚಿಯನ್ನು ವರ್ಣಿಸುವುದಕ್ಕೆ ನನಗೆ ಶಕ್ತಿ ಸಾಲದು ; ಅತಿಕೃಚ್ಛ್ರ, ಚಾಂದ್ರಾಯಣ, ಸಾಂತಪನ ವ್ರತಗಳನ್ನು ಮಾಡಿದ ಪುಣ್ಯಕ್ಕೂ ಅದು ಮಿಗಿಲಾದದ್ದು. ೧೪. ಇಂಥ ಪತಿವ್ರತೆಯರೇನು ಪ್ರತ್ಯಕ್ಷ ದೇವತೆಗಳು, ಇವರು ವಾಸಿಸುವ ಸ್ಥಳಗಳು ಪುಣ್ಯ ಕ್ಷೇತ್ರಗಳು, ಇವರು ಮುಟ್ಟಿದ ನೀರು ಪುಣ್ಯತೀರ್ಥ, ಇವರು ವಾಸಿಸುವ ಮನೆ ದೇವಾಲಯ - ಎಂದು ವೇದಜ್ಞಾನಿಗಳು ವರ್ಣಿಸುತ್ತಾರೆ. ೧೫. ವೇದಮತದವರು ಬೆಳಗ್ಗೆ ಎದ್ದು ತಮ್ಮ ಇಷ್ಟದೈವವನ್ನು ಪ್ರೀತಿಯಿಂದ ಹಾಡುವಂತೆ, ಪತಿವ್ರತೆಯರ ಹೆಸರು ಹೇಳಿ ಹಾಡಿ ಹೊಗಳುವುದು ಕ್ರಮವೇ ಆಗಿದೆ. ೧೬. ಪತಿಯ ಪಾದಕಮಲಗಳಲ್ಲಿ ಭಕ್ತಿಯಿಡುವುದೇ ತಮ್ಮ ಇಹಪರಗಳಿಗೆ ಸದ್ಗತಿಯೆಂದು ತಿಳಿದು ಆ ಪಾದಗಳನ್ನೇ ನಂಬಿರುವ ಸಾಧ್ವಿಯರು ಇರುವ ಕಾಲವೇ ಕೃತಯುಗ. ಅಲ್ಲಿ ಇತರ

ಪರಮ ಪತಿವ್ರತೆಯಿದ್ದ ಬಳಿಯೊಳಾ
ಸಿರಿರಾಣಿ ಸೇರಿ ಬಂದಿಹಳು
ಸರಸತಿ ಸಾವಿತ್ರಿ ಗಾಯತ್ರಿಯರುಮಾ
ಪರಿಸರದೊಳು ಬಳಸಿಹರು ೧೭

ಪಲವು ಸುಕೃತಮಿಂತು ಪರಿಣತಿವೆತ್ತುದೊ
ಕುಲದೇಳ್ಗೆ ಗುಂಪುಗೂಡಿದುದೊ
ಸಲೆ ಪರಿಶುದ್ಧಿ ಸಾಕಾರಮಾದುದೊ ಎನೆ
ಕುಲವಧು 'ಕುರುಹು'ಗೊಂಡಿಹಳು ೧೮

ಪತಿಭಕ್ತಿರಸಮಿಂತು ಬಲಿದುದೊ ಪರಿಶುದ್ಧ
ಮತಿಗಿಂತು ಮೈ ದೊರಕಿದುದೊ
ವ್ರತದೇಳ್ಗೆಯಿಂತು ಬಿತ್ತರವಡೆದುದೊ ಎನೆ
ಸತಿಯರು ಜಸವಡೆದಿಹರು ೧೯

ಜಗದೊಳುಪಾಂಸುಲೆಯರ ಚರಿತಕೆ ಸರಿ
ಮಿಗಿಲಿಲ್ಲ ಮಿಕ್ಕ ಧರ್ಮದೊಳು
ಬಗೆಯರಿತೆಸಗಬಲ್ಲವರಿಗೆಂದೆಂದಿಗೂ
ಮೊಗದೋರವು ಮೋಸಗಳು ೨೦

ಯುಗಗಳ ಧರ್ಮಕ್ಕೆ ಅವಕಾಶವೇ ಇಲ್ಲ. ೧೭. ಪರಮ ಪತಿವ್ರತೆಯಿದ್ದ ಜಾಗದಲ್ಲಿ ಲಕ್ಷ್ಮಿ ಕೂಡಿಬರುತ್ತಾಳೆ. ಸರಸ್ವತಿ, ಸಾವಿತ್ರಿ, ಗಾಯಿತ್ರಿಯರು ತಮ್ಮ ಪರಿಸರದಲ್ಲೇ ಬಳಸಿ ನಿಂದಿರುತ್ತಾರೆ. ೧೮. ಹಲವು ಪುಣ್ಯಕಾರ್ಯಗಳು ಹೀಗೆ ಪಕ್ವವಾಗಿ, ವಂಶದ ಅಭಿವೃದ್ಧಿ ರಾಶಿಯಾಗಿ, ಪಾವಿತ್ರ್ಯ, ಪಾರುಶುದ್ಧಗಳು ಆಕಾರ ತಳೆದು ಈ ಕುಲವಧು ರೂಪವನ್ನು ತಾಳಿದೆಯೋ ಏನೊ ! ೧೯. ಪತಿಭಕ್ತಿರಸವು ಘನೀಭೂತವಾಗಿ, ಪರಿಶುದ್ಧವಾದ ಬುದ್ಧಿ ಮೈತಳೆದು, ವ್ರತಗಳ ಪರಿಪೂರ್ಣತೆ ವಿಸ್ತೃತಗೊಂಡು ಪತಿವ್ರತೆಯರಾಗಿ ಕೀರ್ತಿ ಪಡೆದಿವೆಯೋ ಏನೊ ! ೨೦. ಲೋಕದಲ್ಲಿ ಪತಿವ್ರತೆಯರ ಚಾರಿತ್ರ್ಯಕ್ಕೆ ಮಿಗಿಲಾದದ್ದಾಗಲಿ, ಸರಿಯಾದದ್ದಾಗಲಿ ಮಿಕ್ಕ ಧರ್ಮಗಳಲ್ಲಿ ಕಂಡುಬರುವುದಿಲ್ಲ. ಅವರ ಮನಸ್ಸನ್ನರಿತು ನಡೆಯಬಲ್ಲವರು ಎಂದೂ ಮೋಸಹೋಗುವುದಿಲ್ಲ.

---

೩. (ಖ) ಗುರುತು

ಈ ಕಾಲವಾ ಕಾಲವೀ ದೇಶವಾ ದೇಶ
ವೀ ಕುಲವಾ ಕುಲವೆನ್ನದೆ
ಏಕರೀತಿಯೊಳೆಸಗುವ ಧರ್ಮಕಿದಕಿನ್ನು
ಲೋಕದೊಳಿಣೆ ಬೇರುಂಟೆ ೨೧

ಉಣದುಡದೊಡಲ ದಂಡಿಸುವಾಯಸವಿಲ್ಲ
ಪಣವ ವೆಚ್ಚಿಸುವ ಪಾಡಿಲ್ಲ
ಗುಣವಂತೆಯರೆಸಗುವ ಪತಿಶುಶ್ರೂಷೆ
ಗೆಣೆಯಹ ತಪ[೪]ವಿನ್ನೊ[೪]ಳವೆ ೨೨

ಪಲನಾಡಿಗೆ ಪರಿಪರಿದು ಬಳಲಿಯಲ್ಲಿ
ಪಲನೀರ ಮುಳುಗಿ ಮುಂಗೆಡದೆ
ನಲಿದೆಸಗುವ ನಲ್ವೆಂಡಿರ ನಡತೆಗೆ
ಪಲನೇಮಗಳು ಪಾಸಟಿಯೆ ೨೩

ಮನೆಯ ತೊರೆದು ಮನೆವಾಳ್ತೆಯನುಳಿದು ತ
ನ್ನನುಕೂಲದಾಸೆಯನಳಿದು
ಬನದೊಳು ಗೈವ ಬರಿಯ ತಪಗಳು ಕುಲ
ವನಿತೆಯರಿರವಿಗೆ ದೊರೆಯೆ ೨೪

ಅವರಿಗೆ ಯಾರೂ ಮೋಸ ಮಾಡುವುದಿಲ್ಲ. ೨೧. ಈ ಕಾಲ, ಆ ಕಾಲ, ಈ ದೇಶ, ಆ ದೇಶ, ಈ ಕುಲ ಆ ಕುಲ - ಎನ್ನುವ ಭೇದವಿಲ್ಲದೆ ಒಂದೇ ಪ್ರಕಾರವಾಗಿ ಆಚರಿಸುವ ಈ ಪತಿವ್ರತಾಧರ್ಮಕ್ಕೆ ಲೋಕದಲ್ಲಿ ಸಮನಾದ ಬೇರೊಂದು ಧರ್ಮವಿಲ್ಲ. ೨೨. ಈ ವ್ರತಕ್ಕೆ ಉಪವಾಸವಿದ್ದು, ವಸ್ತ್ರಾಭರಣ ಧರಿಸದೆ ದೇಹವನ್ನು ದಂಡಿಸುವ ಆಯಾಸ ವಿಲ್ಲ ; ಹಣ ವೆಚ್ಚಮಾಡುವ ಪ್ರಯಾಸವಿಲ್ಲ, ಗುಣವಂತರಾದ ಸ್ತ್ರೀಯರು ನಡಸುವ ಪತಿಸೇವೆ ಎಂಬ ತಪಸ್ಸಿಗೆ ಸಮನಾದ ತಪಸ್ಸು ಬೇರೊಂದಿಲ್ಲ. ೨೩. ಬೇರೆ ಬೇರೆ ದೇಶಗಳಿಗೆ ಕಷ್ಟಪಟ್ಟು ಆಯಾಸಗೊಂಡು ಪ್ರಯಾಣಮಾಡಿ ಅಲ್ಲಲ್ಲಿ ಬೇರೆ ಬೇರೆ ತೀರ್ಥಗಳಲ್ಲಿ ಮುಳುಗಿ ಸ್ನಾನಮಾಡಿ ವ್ರತವಾಚರಿಸಿದರೂ ಆನಂದದಿಂದ ಪತಿಸೇವೆ ಮಾಡುವ ಸಾಧ್ವಿಯರ ನಡತೆಯ ಹಲವಾರು ವ್ರತಗಳಿಗೆ ಅವು ಸಮನಾಗುವುದಿಲ್ಲ. ೨೪. ಮನೆ ಬಿಟ್ಟು ಸಂಸಾರವನ್ನು ತ್ಯಾಗಮಾಡಿ, ತನ್ನ ಸ್ವಾರ್ಥದ ಆಸೆಯನ್ನು ತ್ಯಜಿಸಿ ಕಾಡಿಗೆ ಹೋಗಿ ಮಾಡುವ ತಪಸ್ಸುಗಳು ಕುಲಭೂಷಣರಾದ ಪತಿವ್ರತಾಸ್ತ್ರೀಯರ

---

೪. (ಖ) ಗಳಿನ್ನೊ.

ಮನೆಯೆ ಧರ್ಮಾಶ್ರಮ ಮನೆವಾಳ್ತೆಯೆ ಧರ್ಮ
ಏನಿಯನೂಳಿಗ ದೇವಪೂಜೆ
ಮನನವಿವನ ನೆನೆವುದೆ ಸಾಧ್ವಿಯರಿಗೆ
ಮುನಿಸತಿಯರ ನೋಡಿಯೇನು ೨೫

ಇನಿಯನ ಸೇವೆಯೊಳೆಸೆಯಿಲ್ಲದ ಧರ್ಮ
ಮನೆವಾಳ್ತೆಯೊಳರ್ಥಕಾಮ
ಮನದನ್ನನೊಳು ಮಾಧವನ ಭಾವಿಸೆ ಮೋಕ್ಷ
ವೆನೆ ಸತಿಯರಿಗರಿದೇನು ೨೬

ಪಲವು ಧರ್ಮಂಗಳ ಬಳೆಯಿಪುದಾಯಾಸ
ಫಲವ ಭೋಗಿಪುದಾನಂದ
ಕುಲಸತಿಧರ್ಮವ ಕೂರ್ತೆಸಗುವುದಾ
ಫಲಭೋಗಕೆ ಪಾಟಿಯಲ್ತೆ ೨೭

ಕಡುನೇಮವಿಡಿದು ಕಕ್ಕಸಗೊಂಡು ಮುನಿವರ
ರೊಡರಿಸುವುಗ್ರತಪಗಳು
ಮಡದಿಯರಿನಿಯರ ಮನವರಿತೆಸಗುವ
ನಡತೆಗಳಿಗೆ ಪಡಿಯಲ್ಲ ೨೮

ಯಥಾಸ್ಥಿತಿಗೆ ಸರಿಯಾಗುವುದಿಲ್ಲ. ೨೫. ತನ್ನ ಮನೆಯೇ ಧರ್ಮದ ಆಶ್ರಮ, ತನ್ನ ಸಂಸಾರ ನಿರ್ವಹಣೆಯೇ ನಿಜವಾದ ಧರ್ಮ, ಪತಿಯ ಸೇವೆಯೇ ದೇವರ ಪೂಜೆ, ಆತನನ್ನು ನೆನೆಯುವುದೇ ಸಾಧ್ವಿಯರಿಗೆ ಚಿಂತನೆ - ಹೀಗಿರುವಾಗ ಮುನಿಪತ್ನಿಯರ ಹೆಚ್ಚುಗಾರಿಕೆ ಏನು ? ೨೬. ಪ್ರಿಯನ ಸೇವೆಯಲ್ಲಿಯೇ ಉತ್ತಮ ಧರ್ಮವನ್ನೂ ಸಂಸಾರ ನಿರ್ವಹಣಾಕರ್ತವ್ಯದಲ್ಲಿ ಅರ್ಥಕಾಮವನ್ನೂ, ಗಂಡನಲ್ಲಿಯೇ ಲಕ್ಷ್ಮೀಪತಿ ಯನ್ನೂ ಕಾಣುವುದೇ ಮೋಕ್ಷವೆಂದು ಭಾವಿಸಿರುವ ಸಾಧ್ವಿಯರಿಗೆ ಏನು ತಾನೆ ಅಸಾಧ್ಯ ? ೨೭. ಅನೇಕ ಧರ್ಮಗಳನ್ನು ನಡೆಸುವುದು ಕಷ್ಟಕರವಾದುದು. ಅವುಗಳ ಫಲವನ್ನು ಅನುಭವಿಸುವಾಗ ಆನಂದವಿರುತ್ತದೆ. ಪತಿವ್ರತೆಯ ಧರ್ಮವನ್ನು ಪ್ರೀತಿ ನಿಷ್ಠೆಗಳಿಂದ ಆಚರಿಸುವುದು ಆ ಎಲ್ಲ ಧರ್ಮಗಳ ಫಲಭೋಗಕ್ಕೆ ಸಮಾನ ವಲ್ಲವೆ ? ೨೮. ಅತ್ಯಂತ ಕಠಿನವಾದ ನೇಮವನ್ನು ಕೈಕೊಂಡು ಶ್ರಮಪಡುತ್ತ ಋಷಿಗಳು ನಡೆಯುವ ಉಗ್ರವಾದ ತಪಸ್ಸುಗಳು, ಸಾಧ್ವಿಯರು ತಮ್ಮ ಪತಿಗಳ ಮನಸ್ಸನ್ನು ಅರ್ಥಮಾಡಿಕೊಂಡು ನಡೆದುಕೊಳ್ಳುವ ನಡತೆಗೆ ಸರಿಸಮಾನವಾಗುವುದಿಲ್ಲ.

ಆ ರೂಢಿವೆತ್ತ ಮಹಾಭಾರತದೊಳ
ಗಾರಣ್ಯಕ ಪರ್ವದೊಳು
ನೂರತೊಂಬತ್ತೆಂಟನೆಯಧ್ಯಾಯದೊ
ಳಾರಯ್ಯೆ ಕಥೆಯೊಂದುಂಟು ೨೯

ಸಾಂಗ ವೇದವನೋದಿ ಸಕಲ ಧರ್ಮದ ತ
ತ್ವಂಗಳನರಿತಾಚರಿಸಿ
ತುಂಗ ಮಹಿಮೆವೆತ್ತು ದೋಷವಳಿದು ಮುನಿ
ಪುಂಗವನೊರ್ವನೆಸೆದನು ೩೦

ಮನೆಯೊಳು ಮರುಕವನುಳಿದು ತಪವಗೈದು
ಮನದಿ ವನವನನುಸರಿಸಿ
ತನುವ ದಂಡಿಸಿ ಘೋರ ತಪವನೆಸಗುತಲ್ಲಿ
ಮುನಿಮುಖ್ಯನೆನಿಸಿ ಮೆರೆದನು ೩೧

ಒಂದು ದಿವಸ ವೇದಮೋದುತ ಬೇಸಗೆ
ಯಿಂದ ಬಳಿದ ಬಿಸಿಲಿನೊಳು
ಬೆಂದುರೆ ಬೆಮರುತ ಬಿಸುಸುಯ್ಯುತ್ತಂದು
ನಿಂದನು ಮರದ ನೆಳಲೊಳು ೩೨

೨೯. ಪ್ರಸಿದ್ಧವಾಗಿ ರೂಢಿಯೊಳಗಿರುವ ಮಹಾಭಾರತ ಅರಣ್ಯಪರ್ವದ ನೂರ ತೊಂಬತ್ತೆಂಟನೆಯ ಅಧ್ಯಾಯದಲ್ಲಿ ಒಂದು ಕಥೆಯಿದೆ. ೩೦. ಒಬ್ಬ ಋಷಿ ಶ್ರೇಷ್ಠನಿದ್ದನು. ಅವನು ವೇದಗಳನ್ನೆಲ್ಲ ಪೂರ್ಣವಾಗಿ ಓದಿದ್ದನು. ಲೋಕದ ಎಲ್ಲ ಧರ್ಮಗಳ ತತ್ವಗಳನ್ನು ತಿಳಿದುಕೊಂಡಿದ್ದನು. ಅಷ್ಟೇ ಅಲ್ಲ, ಅವುಗಳನ್ನು ಆಚರಣೆಯಲ್ಲೂ ತಂದಿದ್ದನು. ದೋಷರಹಿತನಾಗಿ ಒಳ್ಳೆಯ ಮಹಿಮಾನ್ವಿತನಾಗಿದ್ದನು. ೩೧. ಆತ ಮನೆಯ ಮೇಲೆ ಮಮತೆಯನ್ನು ತ್ಯಜಿಸಿದನು. ತಪಸ್ಸು ಮಾಡಬೇಕೆಂದು ಕಾಡಿಗೆ ಹೋದನು. ಅಲ್ಲಿ ದೇಹವನ್ನು ದಂಡಿಸಿ ಘೋರವಾದ ತಪಸ್ಸನ್ನು ಮಾಡುತ್ತಿದ್ದನು. ಅಲ್ಲಿನ ಋಷಿಗಳಲ್ಲಿ ಅವನೇ ಪ್ರಮುಖನಾದನು. ೩೨. ಒಂದು ದಿವಸ ವೇದವನ್ನು ಪಠಿಸುತ್ತಿದ್ದನು. ಅದು ಬೇಸಗೆಯ ಕಾಲ. ಬಿಸಿಲಿನ ಬೇಗೆಯಿಂದ ಬೆಂದು ಬೆವರುತ್ತ ನಿಟ್ಟುಸಿರುಬಿಡುತ್ತ ಒಂದು ಮರದ ನೆರಳಲ್ಲಿ ನಿಂತುಕೊಂಡನು.

ಆ ಋಷಿವರನಂತಿರ್ಪ ವೇಳೆಯೊಳಾ
ಭೂರುಹದಗ್ರಶಾಖೆಯೊಳು
ಸೇರಿದ ಬಿಳುವಕ್ಕಿ ಚೀರುವ ದನಿ ಮಿಗೆ
ಕೂರಮಾಗಿರೆ ಕೊನರಿದುದು ೩೩

ಆ ಪರಿ ದನಿ ಯಾವ ಬಳಿಯೊಳು ಪೊಣ್ಮಿದು
ದಾ ಪರಿಸರವನಾರೈದು
ಕೋಪವೆರಸಿ ಕೂರ್ತು ನೋಡೆ ತಾಪಸನಂ
ದಾ ಪಕ್ಕಿಗಸುವಡಗಿದುದು ೩೪

ಹರಣವಳಿದು ಧರೆಗುರುಳಿದ ಪಕ್ಕಿಯ
ಪರಿಯ ನಿಟ್ಟಿಸಿ ಪರಿತಪಿಸಿ
ಇರದೆ ತಾನೆಸಗಿದ ತಪಗಳ ಮೈಮೆಗೆ
ಸರಿಯಿಲ್ಲೆಂದೆಣಿಸಿದನು ೩೫

ಬಳಿಕ ಪಸಿದು ಪಾರ್ವರ ಬೀದಿಯೊಳೊಂದು
ನಿಳಯವ ಪೊಕ್ಕು ನಿಂದಲ್ಲಿ
ಬಳಲಿದೆನೆನಗುಣಬಡಿಸೆಂದಲ್ಲಿರ್ದ
ಕುಲಪಾಲಿಕೆಗುಸುರಿದನು ೩೬

೩೩. ನೆರಳಿನ ಆಶ್ರಯದಲ್ಲಿ ಆ ಮುನಿವರ ನಿಂತಿದ್ದಾಗ ಆ ಮರದ ಮೇಲಿನ ಒಂದು ಕೊಂಬೆಯಲ್ಲಿ ಒಂದು ಪಾರಿವಾಳ ಏಕೋ ಅರಚಿಕೊಳ್ಳುತ್ತಿತ್ತು. ಅದರ ಅರಚುವ ಧ್ವನಿ ಮುನಿಗೆ ಕರ್ಕಶವಾಗಿ ಕೇಳಿಸಿತು. ಅವನ ಮನಸ್ಸನ್ನು ಕಲಕಿತು. ೩೪. ಈ ಧ್ವನಿ ಎಲ್ಲಿಂದ ಬರುತ್ತಿದೆ ? ಎಂದು ಮುನಿ ಆ ಕಡೆಗೆ ತೀವ್ರ ಕೋಪದಿಂದ ನೋಡಿದನು. ತಪಸ್ವಿಯ ಆ ಕ್ರೂರದೃಷ್ಟಿಗೆ ಆ ಪಕ್ಷಿಯ ಪ್ರಾಣ ಇಂಗಿಹೋಯಿತು. ೩೫. ಪ್ರಾಣ ಹೋಗಿ ಭೂಮಿಯ ಮೇಲೆ ಬಿದ್ದ ಪಕ್ಷಿಯ ರೀತಿಯನ್ನು ದೃಷ್ಟಿಸಿ ನೋಡಿದನು. ತಾನು ಮಾಡಿದ ತಪಸ್ಸಿನ ಮಹಿಮೆಗೆ ಸರಿಹೋಲುವ ಇನ್ನೊಂದು ತಪಸ್ಸಿಲ್ಲ ಎಂದುಕೊಂಡನು. ೩೬. ಅವನಿಗೆ ಅಷ್ಟರಲ್ಲಿ ಹಸಿವಾಗಿತ್ತು. ಊರಿಗೆ ಬಂದು ಬ್ರಾಹ್ಮಣರ ಬೀದಿಯಲ್ಲಿ ಒಂದು ಮನೆಗೆ ಹೋಗಿ 'ನನಗೆ ಹಸಿವಾಗಿದೆ. ನನಗೆ ಊಟಕ್ಕೆ ಹಾಕಿ' ಎಂದು ಅಲ್ಲಿನ ಸಾಧ್ವಿಯನ್ನು

ಒಲಿದೇಕಪತ್ನಿಯೆಂಬೊಳ್ಳೆಸರೆಸೆವಾ
ಕುಲಸತಿಯಳ್ಕರುಗೂಡಿ
ನಲವಿನಿಂದವನಿಗನ್ನವನೀಯುವೆನೆಂದು
ಕೆಲದೊಳು ಕುಳ್ಳಿರಿಸಿದಳು ೩೭

ಅನಿತರೊಳಲ್ಲಿಗವಳ ಗಂಡನೈತರೆ
ಮನವೊಲಿದಿದಿರೆದ್ದು ನಡೆದು
ವಿನಯದಿಂದುಚಿತೋಪಚಾರವೆಸಗಿ ಮಿಗೆ
ಮನದನ್ನನ ಮನ್ನಿಸಿದಳು ೩೮

ಪತಿಸೇವೆಯೊಳಂತು ಪಸಿದ ಪಾರ್ವನ ಮರೆ
ದತಿ ವಿಳಂಬವನಾಚರಿಸೆ
ಸತಿಯರ ಧರ್ಮದ ಸಾರವನರಿಯದೆ
ಖತಿಗೊಂಡು ಮುನಿ ಗಳಪಿದನು ೩೯

ಅತಿಘೋರ ತಪವೆಮ್ಮದದನು ನೀನರಿಯದೆ
ಮತಿಗೆಟ್ಟು ಮರುಳಾಗದಿರು
ಪತಿಶುಶ್ರೂಷೆಯ ಬಲ್ಮೆ ಫಲಿಸದಿಲ್ಲಿ
ಯತಿಧರ್ಮದಿರವಿದು ಬೇರೆ ೪೦

ಕೇಳಿದನು. ೩೭. ಅವಳ ಹೆಸರು 'ಏಕಪತ್ನಿ' ಎಂದು. ಆ ಸಾಧ್ವಿ ವಿಶ್ವಾಸದಿಂದ ಊಟ ಬಡಿಸಬೇಕೆಂದು ಒಂದು ಕಡೆ ಕುಳ್ಳಿರಲು ಹೇಳಿದಳು. ೩೮. ಅಷ್ಟರಲ್ಲಿ ಅವಳ ಗಂಡ ಮನೆಗೆ ಬಂದನು. ಅವಳ ಮನಸ್ಸು ಗಂಡನ ಕಡೆಗೆ ಹರಿಯಿತು. ಗಂಡನಿಗೆ ಉಪಚಾರ ಮಾಡಿದಳು. ಆತನ ಮನಸ್ಸನ್ನು ಸಂತೋಷಪಡಿಸಿದಳು. ಅತಿಥಿಯನ್ನು ಮರೆತಳು. ೩೯. ಗಂಡನ ಸೇವೆಯಲ್ಲಿ ಮಗ್ನಳಾದ ಆ ಏಕಪತ್ನಿ ಹಸಿದು ಬಂದಿದ್ದ ಬ್ರಾಹ್ಮಣನನ್ನು ಮರತೇಬಿಟ್ಟಳು. ಆ ತಪಸ್ವಿ ಕಾದು ಕಾದು ಬೇಸರ ಪಟ್ಟನು. ಅವನಿಗೆ ಪತಿವ್ರತೆಯ ಧರ್ಮದ ಸಾರ ತಿಳಿದಿರಲಿಲ್ಲ. ಅವನಿಗೆ ಕೋಪ ಬಂತು. ಬಾಯಿಗೆ ಬಂದಂತೆ ಹರಟಿದನು. ೪೦. "ನಮ್ಮದು ಉಗ್ರವಾದ ತಪಸ್ಸು. ಅದರ ವಿಚಾರ ನಿನಗೆ ತಿಳಿಯದು. ನೀನು ಬುದ್ಧಿಹೀನಳಾಗಿ ಮರುಳಾಗಿದ್ದೀಯೆ. ಗಂಡನ ಸೇವೆ ಇಲ್ಲಿ ಫಲಿಸಲಾರದು. ಸನ್ಯಾಸಿಗಳ ಧರ್ಮ ಇದು ಬೇರೆ"

ಎಂದು ಗರ್ವದ ಸೊಕ್ಕೇರಿ ನುಡಿದ ಮುನಿ
ಯಂದಮನಾರೈದೊಡನೆ
ಅಂದು ತನ್ನಾಣ್ಮನೊಳನುಮತಿವಡೆದೈ
ತಂದು ನುಡಿದಳಿಂತೆಂದು ೪೧

ಬಳಲಿದೆ ಸಾಕಿನ್ನು ಬಡಿಸಿದನ್ನವನುಂಡು
ತಳುವದೆ ತಪವನಾಚರಿಸು
ಬಿಳುವಕ್ಕಿಯ ಬೀಳಗೆಡಹಿದ ಬಿಂಕವೀ
ಬಳಿಯೊಳು ಬಣ್ಣವಡೆಯದು ೪೨

ಮರುಳೆ ನೀನೀ ಮಾತ ಮರೆ ಧರ್ಮಸೂಕ್ಷ್ಮದೊಂ
ದಿರವ ನೀನರಿತವನಲ್ಲ
ಪರಮ ಪತಿವ್ರತೆಯರ ಬಗೆ ಬೇರಿದು
ಹರಿಹರಾದ್ಯರ ಹವಣಲ್ಲ ೪೩

ಇತರ ಚಿಂತೆಯನುಳಿದೇಕಚಿತ್ತದೊಳಾತ್ಮ
ಪತಿಪಾದಭಕ್ತಿಯೊಳೆಸೆವ
ಸತಿಯರೊಲಿದು ಪರಸಿದುದೆಯನುಗ್ರಹ
ಖತಿಗೊಂಡು ನುಡಿದುದೆ ಶಾಪ ೪೪

೪೧. ಎಂದು ಅಹಂಕಾರದಿಂದ ಋಷಿ ಕೂಗಾಡಿದನು. ಆ ಮುನಿಯ ಅವಸ್ಥೆಯನ್ನು ಕುರಿತು ಏಕಪತ್ನಿ ಯೋಚಿಸಿದಳು. ಗಂಡನ ಬಳಿಗೆ ಹೋಗಿ ಅವನ ಅಪ್ಪಣೆಯನ್ನು ಪಡೆದು ಬಂದು ಋಷಿಯನ್ನು ಕುರಿತು ಹೀಗೆ ಹೇಳಿದಳು. ೪೨. "ನಿಮಗೆ ತುಂಬ ಆಯಾಸವಾಗಿದೆ. ಹೀಗೆ ಮಾತನಾಡಿ ಮತ್ತಷ್ಟು ಆಯಾಸಪಟ್ಟು ಕೊಳ್ಳಬೇಡಿ. ಹಾಕಿದ ಊಟವನ್ನು ಉಂಡು ತಡಮಾಡದೆ ನಿಮ್ಮ ತಪಸ್ಸನ್ನು ಮುಂದುವರಿಸಿ. ಕಾಡಿನಲ್ಲಿ ಪಾರಿವಾಳವನ್ನು ಕೊಂದ ಅಹಂಕಾರ ಈ ಸ್ಥಳದಲ್ಲಿ ಬೆಲೆ ಪಡೆಯುವುದಿಲ್ಲ ! ೪೩. ಅಯ್ಯೊ ಮರುಳೆ, ನೀನು ಹೇಳಿದ ಮಾತನ್ನು ಮರೆತುಬಿಡು. ಧರ್ಮದ ಸೂಕ್ಷ್ಮಾರ್ಥ ವನ್ನು ನೀನು ತಿಳಿದುಕೊಂಡಿಲ್ಲ. ಪರಮ ಪತಿವ್ರತೆಯರ ರೀತಿಯೇ ಬೇರೆ ಆದದ್ದು. ಅದು ಹರಿಹರರಿಗೂ ತಿಳಿಯುವಂಥದಲ್ಲ ! ೪೪. ಇತರ ರೀತಿಯ ಚಿಂತೆ ಗಳನ್ನು ಬಿಟ್ಟು ಏಕಮನಸ್ಸನಿಂದ ತನ್ನ ಗಂಡನ ಪಾದಗಳನ್ನು ಭಕ್ತಿಯಿಂದ ಸೇವಿಸುವ ಸತೀಮಣಿಗಳು ಪ್ರೀತಿಯಿಂದ ಹರಸಿದರೆ ಅದೇ ಅನುಗ್ರಹ, ವರ. ಅವರು ಕೋಪಿಸಿಕೊಂಡು

ವ್ರತಿ ವಾನಪ್ರಸ್ಥ ಯತಿಗಳಿರದೆ ಗೈ
ವತಿಘೋರ ತಪದಾಚರಣೆ
ಸತಿಯರ ಧರ್ಮಕೆ ಸರಿಯಿಲ್ಲೆಂದು ಗೀ
ಷ್ಪತಿಯಗಸ್ತ್ಯನೊಳಾಡಿದನು 					೪೫

ಆ ತ್ರಿಮೂರ್ತಿಗಳಾಮಂತ್ರಿತ ಜಲಸೇಕ
ಮಾತ್ರದೆ ಮೈಮೆ ಮೈದೆಗೆದು
ಅತ್ರಿಯ ಸತಿಗನಸೂಯಾದೇವಿಗೆ
ಪುತ್ರರಾದರು ಪೂರ್ವದೊಳು 					೪೬

ಪಾತಿವ್ರತ್ಯದೇಳ್ಗೆಯ ಪರಿಕಿಪೆನೆಂ
ದೋತು ರಾಘವನುಸಿರ್ದೊಡನೆ
ಸೀತೆ ಬೆಂಕಿಯ ಪುಗೆ ಶೀತಳಮಾದುದು
ಮಾತಾವುದು ಮತ್ತೆ ಬೇರೆ 					೪೭

ಹರನ ಸಾಹಸಕಂಜದೆ ಪಲವಗಲು ಮು
ಪ್ಪುರ ಪಡಿಬಡಿಸಿ ಪೋರಿದುದು
ಪುರದೊಳಗಿರ್ಪ ಪುಣ್ಯಾಂಗನೆಯರ ಸ
ಚ್ಚರಿತದ ಸಲಿಗೆಯಿಂದ್ಯೆಸೆ 					೪೮

ಮಾತನಾಡಿದರೆ ಅದು ಶಾಪ. ೪೫. ವ್ರತನಿಷ್ಠನೂ ಅರಣ್ಯದಲ್ಲಿ ವಾಸಮಾಡುವ ಯತಿಯೂ ಬಿಡದೆ ಮಾಡುವ ಅತಿ ಘೋರವಾದ ತಪಸ್ಸು ಸಾಧ್ವಿಯರ ತಪಸ್ಸಾದ 'ಪಾತಿವ್ರತ್ಯ'ಕ್ಕೆ ಸರಿಯಾಗಲಾರದು. ಈ ವಿಚಾರವನ್ನು ಬ್ರಹ್ಮನೇ ಅಗಸ್ತ್ಯರಿಗೆ ಹೇಳಿದ್ದಾನೆ. ೪೬. ಹಿಂದೆ ಅತ್ರಿಋಷಿಗಳ ಪತ್ನಿ ಅನಸೂಯೆಯನ್ನು ಪರೀಕ್ಷಿಸಲು ತ್ರಿಮೂರ್ತಿಗಳು ಬಂದರು. ಆಕೆ ಮಂತ್ರಪೂತ ಜಲದಿಂದ ಅವರನ್ನು ಪ್ರೋಕ್ಷಿಸಿದಳು. ಕೂಡಲೆ ಬ್ರಹ್ಮ ವಿಷ್ಣು ಮಹೇಶ್ವರರು ಮಕ್ಕಳಾಗಿ ಹೋದರು! ೪೭. ಪಾತಿವ್ರತ್ಯದ ಮಹಿಮೆಯನ್ನು ಪರೀಕ್ಷಿಸುತ್ತೇನೆ ಎಂದು ರಾಮ ಹೇಳಿದ. ಸೀತೆ ಅದಕ್ಕಾಗಿ ಬೆಂಕಿಯನ್ನು ಪ್ರವೇಶಿಸಿದಳು. ಪಾತಿವ್ರತ್ಯದ ಮಹಿಮೆಯಿಂದ ಬೆಂಕಿ ಶೀತವಾಯಿತು. ಇದಕ್ಕೆ ಬೇರೆ ಮಾತಿದೆಯೆ ? ೪೮. ಈಶ್ವರನ ಸಾಹಸಕ್ಕೂ ಹೆದರದೆ ತ್ರಿಪುರದ ಪತಿವ್ರತೆಯರು ಹಲವು ದಿನಗಳವರೆಗೆ ತ್ರಿಪುರಾರಿಯನ್ನು ಪ್ರತಿಭಟಿಸಿ ದೇಶವನ್ನು ರಕ್ಷಿಸಿದರು. ಇದು ಆ ಪುರದ ಪತಿವ್ರತೆಯರ ಸಚ್ಚಾರಿತ್ರ್ಯದ ಪ್ರಭಾವದಿಂದ ಮಾತ್ರ ಸಾಧ್ಯವಾಯಿತು.

ಧರ್ಮಗತಿ ತಾರತಮ್ಯವ ತಿಳಿವೊಡೆ
ಪೆರ್ಮೆಯ ಬಿಟ್ಟು ಬೇಸರದೆ
ನಿರ್ಮಲಮತಿಯಾಗಿ ನೀ ನಡೆ ಮಿಥಿಲೆಗೆ
ಧರ್ಮವ್ಯಾಧನ ಬಳಿಗೆ ೪೯

ಎಂದೇಕಪತ್ನಿ ನುಡಿಯೆ ಕೇಳಿ ಮುನಿ ಮನ
ದಂದವಳಡಿಗಳಿಗೆರಗಿ
ಅಂದಿನ ಗರ್ವವಳಿದು ಮಿಥಿಲೆಯ ಬಳಿ
ಸಂದನು ಸಂತೋಷದೊಳು ೫೦

ಈ ಪಾತಿವ್ರತ್ಯದೇಳ್ಗೆಯನಾಲಿಸೆ
ಪಾಪಗಳೆದ್ದು ಪಾರುವುವು
ಶ್ರೀಪತಿಯಿವರೆನ್ನ ಸೇವಕರೆಂದುರೆ
ಕಾಪಿಡುವನು ಕರುಣದೊಳು ೫೧

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಮನ್ನಣೆವಡೆದುದೊಂದರ ಮುಂದಣ ಸಂಧಿ
ಸನ್ನುತ ಗುಣಸಂಬಂಧಿ ೫೨

೪೯. ನೀನು ಧರ್ಮಮಾರ್ಗದ ಹೋಲಿಕೆ ವ್ಯತ್ಯಾಸಗಳನ್ನು ತಿಳಿಯಲು ಅಪೇಕ್ಷಿದರೆ ನಿನ್ನ ಅಹಂಕಾರವನ್ನು ಬಿಟ್ಟು, ಬೇಸರ ಮಾಡಿಕೊಳ್ಳದೆ ಶುದ್ಧ ಮನಸ್ಸಿನಿಂದ ಮಿಥಿಲಾ ಪಟ್ಟಣದಲ್ಲಿರುವ ಧರ್ಮವ್ಯಾಧನ ಬಳಿಗೆ ಹೋಗು !" ೫೦. ಎಂದು ಏಕಪತ್ನಿ ಹೇಳಿದ್ದನ್ನು ಮುನಿವರ್ಯನು ಕೇಳಿದನು. ಅವಳು ಹೇಳಿದ್ದನ್ನು ಮನಸ್ಸಿಗೆ ತಂದುಕೊಂಡನು. ಅವಳ ಪಾದಗಳಿಗೆ ನಮಸ್ಕಾರಮಾಡಿದನು. ಅಂದಿನ ಅವರ ಅಹಂಕಾರ ಕಳೆದು ಹೋಯಿತು. ಸಂತೋಷದಿಂದ ಮಿಥಿಲಾನಗರಕ್ಕೆ ತೆರಳಿದನು. ೫೧. ಪಾತಿವ್ರತ್ಯ ಧರ್ಮದ ಹೆಚ್ಚಳವನ್ನು ಕೇಳಿದರೆ ಪಾಪಗಳು ಹಾರಿಹೋಗುತ್ತವೆ. ಶ್ರೀಪತಿ ಇಂಥ ಆಸ್ತಿಕರನ್ನು 'ಇವರು ನನ್ನ ಶರಣರು' ಎಂದು ಕರುಣೆಯಿಂದ ಕಾಪಾಡುವನು. ೫೨. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮನು ರಚಿಸಿದ ಕಾವ್ಯದಲ್ಲಿ ಮೊದಲದರ ಮುಂದಿನ (ಎರಡನೆಯ) ಖ್ಯಾತಿ ಪಡೆದ ಗುಣದಿಂದ ಕೂಡಿದ ಸಂಧಿ ಮನ್ನಣೆಯನ್ನು ಪಡೆಯಿತು (ಮುಗಿಯಿತು).

# ಮೂರನೆಯ ಸಂಧಿ

ಶ್ರೀಭೂಮಿನೀಳಾನಾಥನಿಗನುಪಮ
ವೈಭವ ವೈಕುಂಠಪತಿಗೆ
ಸ್ವಾಭಾವಿಕ ಶುಭಗಣನಿಧಿಗಂಬುಜ
ನಾಭನಿಗಾನೆರಗುವೆನು ೧

ದೇವ ಮಾನವ ಮೃಗ ನಗರೂಪದ ವಾಸು
ದೇವನ ವಿಭವಂಗಳನು
ಆ ವಿಧದೊಡಲವೆತ್ತನುಸರಿಸುವ ಲ
ಕ್ಷ್ಮೀವಧುವನು ವಂದಿಪೆನು ೨

ಪತಿಪಾದಭಕ್ತೆಯರೆನಿಸಿ [ಬಣ್ಣನೆ]ವೆತ್ತ
ಸತಿಯರೊಲಿದು ಸಮನಿಸುವ
ಪತಿಶುಶ್ರೂಷೆಯ ಬಗೆಯನರಿತು ಸಂ
ಗತಿಗೈದದನು ಬಣ್ಣಿಪೆನು ೩

ಪತಿಯೆ ಪರಮಗುರು ಪತಿಯೇ ದೇವತೆ
ಪತಿಯೇ ಸದ್ಗತಿಯೆಂದು
ಪತಿಯ ಪಾದಾಂಬುಜದೊಳು ಭಕ್ತಿಗೈವುದು
ಸತಿಯರ ಧರ್ಮದ ಸಾರ ೪

೧. ಶ್ರೀದೇವಿ ನೀಳಾದೇವಿಯರ ಒಡೆಯನಾದ, ಹೋಲಿಕೆಯಿಲ್ಲದ ವೈಭವ ದಿಂದ ಕೂಡಿದ ವೈಕುಂಠಪತಿಗೆ, ಸಹಜವಾದ ಶುಭಗುಣಗಳ ಸಾಗರನಾದ ಕಮಲ ನಾಭನಿಗೆ ನಮಸ್ಕರಿಸುತ್ತೇನೆ. ೨. ದೇವ, ಮನುಷ್ಯ, ಪ್ರಾಣಿ, ಬೆಟ್ಟ[1]ಗಳ ರೂಪಗಳನ್ನು ಹೊಂದಿದ ವಾಸುದೇವನ ವೈಭವಗಳನ್ನು, ಆಯಾ ರೂಪದ ದೇಹಗಳನ್ನು ಧರಿಸಿ ಅದರಂತೆಯೇ ನಡೆದುಕೊಳ್ಳುವ ಲಕ್ಷ್ಮೀರಮಣನನ್ನು ವಂದಿಸುತೇನೆ. ೩. ಪತಿಸೇವಾ ನಿರತರೆಂದು ಖ್ಯಾತಿ ಪಡೆದ ಸಾಧ್ವಿಯರು ಪ್ರೀತಿಯಿಂದ ನಡೆಸುವ ಪತಿಶೂಶ್ರೂಷೆಯ ವಿವರವನ್ನು ತಿಳಿದು ವಿಚಾರಮಾಡಿ ವರ್ಣಿಸುತ್ತೇನೆ. ೪. ಪತಿಯೇ ಶ್ರೇಷ್ಠನಾದ ಗುರು, ಪತಿಯೇ ತನ್ನ ದೈವ, ಪತಿಸೇವೆಯೇ ತನಗೆ ದೊರಕುವ ಸದ್ಗತಿ - ಎಂದು ಪತಿಯ

---

೧. ಗೋವರ್ಧನಗಿರಿಯ ರೂಪ.

ಪತಿಯನೊಲವರಿತು ಪತಿಯ [1]ಸೇರುವೆ[1]ಯೊಳಿದ್ದು
ಪತಿಯೂಳಿಗಗಳನೆಸಗಿ
ಪತಿಯಾಣತಿಯ ಬಂದಿಯೊಳಡಗಿರ್ಪುದು
ಸತಿಯ ಧರ್ಮದ ಸರ್ವಸ್ವ ೫

ವ್ರತ ಹೋಮ ನಿಯಮೋಪವಾಸ ದಾನಂಗಳಿಂ
ದತಿಶಯವಡೆದ ಧರ್ಮಗಳು
ಪತಿಶುಶ್ರೂಷೆಗೆ ಪಡಿಯಲ್ಲೆಂದಿದ
ರತಿಶಯವರಿತಾಚರಿಪುದು ೬

ಪ್ರತಿಮೆಯ ರೂಪದ ಪಂಕಜನಾಭಗೆ
ನತಿಗೈದು ನಲವೇರುವಂತೆ
ಪತಿಯ ರೂಪದೆ ತನ್ನ ಪಾಲಿಗೆ ಬಂದ ಶ್ರೀ
ಪತಿಯ ಪಾದವ ಭಜಿಸುವುದು ೭

ಪಗಲಿರುಳೆನ್ನದೆ ಪತಿಯಾಣತಿಯೊಳು
ಮೊಗದಿರುಹದೆ ಮೊನೆಗೊಳದೆ
ಬಗೆದೆಗೆಯದೆ ತನ್ನ ಭಾಗ್ಯದ ಫಲವೆಂದು
ಬಗೆದು ಭಕ್ತಿಯೊಳೆಸಗುವುದು ೮

ಪಾದಸೇವನೆ ಮಾಡುವುದೇ ಪಾತಿವ್ರತ್ಯಧರ್ಮದ ಸಾರ. ೫. ಗಂಡನ ಒಲವನ್ನು ತಿಳಿದು, ಪತಿಯೊಡನೆ ಹೊಂದಿಕೊಂಡಿದ್ದು, ಪತಿಯ ಕೆಲಸಕಾರ್ಯಗಳನ್ನು ಮಾಡುತ್ತಾ, ಗಂಡನ ಆಜ್ಞೆಯ ಬಂಧನದೊಳಗೆ ಅಡಗಿರುವುದೇ ಪತಿವ್ರತೆಯ ಸಮಸ್ತ ಧರ್ಮವಾಗಿದೆ. ೬. ವ್ರತ, ಹೋಮ, ನಿಯಮ, ಉಪವಾಸ, ದಾನ ಎಂಬ ಪ್ರಖ್ಯಾತವಾದ ಧರ್ಮಗಳು ಪತಿಸೇವೆಗೆ ಸಮಾನವಾದವಲ್ಲ - ಎಂದು ಇದರ ಹೆಚ್ಚಳವನ್ನು ಗಮನಿಸಿ ಆಚರಿಸಬೇಕು. ೭. ಪ್ರತಿಮೆಯ ರೂಪದಲ್ಲಿರುವ ಕಮಲನಾಭನಿಗೆ ನಮಸ್ಕರಿಸಿ ಆನಂದಪಡುವಂತೆ, ಪತಿಯ ಪಾದರೂಪದಲ್ಲಿ ತನ್ನ ಬಳಿಗೆ ಬಂದ ಲಕ್ಷ್ಮೀಪತಿಯ ಪಾದಗಳನ್ನು ಭಜಿಸಬೇಕು. ೮. ಹಗಲು ರಾತ್ರಿ ಎನ್ನದೆ, ಪತಿಯ ಮಾತಿಗೆ ಮುಖ ತಿರುಗಿಸದೆ, ಜಗಳವಾಡದೆ, ಮನಸ್ಸನ್ನು ಹಿಂದೆಗೆಯದೆ, ಅದೇ ತನ್ನ ಭಾಗ್ಯದ ಫಲವೆಂದು ತಿಳಿದು ಭಕ್ತಿಯಿಂದ ನಡೆದುಕೊಳ್ಳಬೇಕು.

---

೧. (ಗ) ಸೇವೆ

ಮಾಯವನನುಗೊಳಿಸದೆ ಮೈಮರಸದೆ
ಕಾಯ ಮನೋವಚನಗಳ
ಆಯಸದಿಂದಳವಳಿಯದೆ ಪತಿಯನು
ಪಾಯದಿಂದುಪಚರಿಸುವುದು ೯

ಒಲಿದು ಪತಿಯ ಮನದೊಲವನಾರೈದು ತಾ
ನಲಸಿಕೆಗೊಳದನುಸರಿಸಿ
ಕುಲಸತಿಯರ ಧರ್ಮ ಕೊನರಿಡೆ ನೇಹವ
ನೆಲೆಗಾಣಿಸಿ ನೆಗಳುವುದು ೧೦

ಇದೊ ನಿನ್ನ ಪತಿ ಬಂದನೆಂಬ ನಲ್ನುಡಿ ಕೇಳಿ
ಮುದವೇರಿ ಮೊಗಸಿರಿವಡೆದು
ಕದುಬಿಯವನ ಸೇವೆಗನುವಪ್ಪ ವಸ್ತುವ
ನೊದವಿಪುದುರ್ವುಗೊಂಡೊಡನೆ ೧೧

ಇಂತು ನೋಡುವೆನಿಂತು ನುಡಿವೆನಿಂತೆಸಗುವೆ
ನಿಂತು ಸೇರುವೆನಿಂತಿರುವೆ
ಇಂತು ಮನ್ನಿಪೆನಿಂತು ಮನಗರಗಿಪೆನೆಂದು
ಚಿಂತಿಪುದೇಕಚಿತ್ತದೊಳು ೧೨

೯. ಭ್ರಾಂತಿಯನ್ನುಂಟುಮಾಡದೆ, ಎಚ್ಚರಗೆಡದೆ ದೇಹ, ಮನಸ್ಸು, ಮಾತುಗಳ ಆಯಾಸದಿಂದ ಬೇಸರಪಟ್ಟುಕೊಳ್ಳದೆ ಗಂಡನನ್ನು ಉಪಾಯದಿಂದ ಉಪಚರಿಸಬೇಕು. ೧೦. ಪ್ರೀತಿಯಿಂದ ಗಂಡನ ಮನಸ್ಸಿನ ಒಲವನ್ನು ಅರಿತು ಸ್ವಲ್ಪವೂ ಬೇಸರಿಸದೆ, ಅವನಂತೆಯೇ ನಡೆದುಕೊಂಡು ಕುಲಸ್ತ್ರೀಯರ ಧರ್ಮ ಚಿಗುರುವಂತೆ ಸ್ನೇಹಸಂಬಂಧ ವನ್ನು ಬಿತ್ತಿ ಖ್ಯಾತಿಯನ್ನು ಪಡೆಯಬೇಕು. ೧೧. 'ನಿನ್ನ ಗಂಡ ಬಂದ' ಎಂಬ ಸಿಹಿಯಾದ ಮಾತ್ನ ಕೇಳಿ ಸಂತೋಷಗೊಂಡು, ಮುಖದಲ್ಲಿ ಆನಂದ ತುಂಬಿಕೊಂಡು ಉತ್ಸಾಹದಿಂದ ಆತನ ಸೇವೆಗೆ ಅಗತ್ಯವಾದ ಪದಾರ್ಥಗಳನ್ನು ಹಿಗ್ಗಿನಿಂದ ಒದಗಿಸ ಬೇಕು. ೧೨. ಒಂದೇ ಮನಸ್ಸಿನಿಂದ ಯಾವಾಗಲೂ 'ನಾನು ಪತಿಯನ್ನು ಹೀಗೆ ನೋಡುತ್ತೇನೆ, ಹೀಗೆ ಮಾತನಾಡಿಸುತ್ತೇನೆ, ಈ ರೀತಿ ನಡೆದುಕೊಳ್ಳುತ್ತೇನೆ, ಹೀಗೆ ಕೂಡುತ್ತೇನೆ, ಈ ರೀತಿ ಇರುತ್ತೇನೆ, ಹೀಗೆ ಗೌರವಿಸುತ್ತೇನೆ, ಈ ರೀತಿ ಮನಸ್ಸನ್ನು

ಮನೆವಾಳ್ತಿ ಮೆಯ್ಯಲಸಿಕೆ ಮಕ್ಕಳ ಮುದ್ದು
ಬನದಂಗಳನು ಬಿಟ್ಟೆದ್ದು
ದನಿಗೇಳದ ಮುನ್ನ ತಾನಿದಿರ್ಗೊಂಡವ
ನನುವರಿತನುಸರಿಸುವುದು ೧೩

ಸೋಗೆ ಮುಗಿಲ ಕಂಡು ಸೊರ್ಕುವಂದದೊಳನು
ರಾಗರಸದ ಲಹರಿಯೊಳು
ಬಾಗಿಲಿನೊಳವೊಕ್ಕು ಬಂದನೆಂಬುದುಮತಿ
ವೇಗದೊಳಿದಿರುಗೊಳುವುದು ೧೪

ತಳುವದಚ್ಯುತನಿಗರ್ಚನೆಗೈವಂತಡಿ
ದೊಳೆದು ತೊಡೆದು ದುಗುಲದೊಳು
ಬಳಿಕ ನಡೆದು ಬಂದು ಬಳಲಿಕೆಗಳೆವಂ
ತೊಳುವಾತುಗಳನೊಡರಿಪುದು ೧೫

ಪಸಿವಲಸಿಕೆಗಳ ಪರಿದು ಕೆಲದೆ ನಿಂದು
ನಸುನಾಣ್ಚುತ ನಲವಿನೊಳು
ಒಸೆದೊಲವರಿತೊಯ್ಯನುಚಿತೋಪಚಾರವ
ನೆಸಗುವುದೇಕಚಿತ್ತದೊಳು ೧೬

ಒಪ್ಪಿಸುತ್ತೇನೆ' ಎಂದು ಚಿಂತಿಸುತ್ತಿರಬೇಕು. ೧೩. ಮನೆಗೆಲಸ, ದೇಹದ ಆಲಸ್ಯ, ಮಕ್ಕಳ ಮುದ್ದು, ವಿನೋದಗಳನ್ನು ತಕ್ಷಣಬಿಟ್ಟು ಗಂಡನ ದನಿ ಕೇಳು ವುದಕ್ಕೆ ಮುಂಚೆಯೇ ಅವನನ್ನು ಎದುರುಗೊಂಡು ಅವನ ಮನಸ್ಸನ್ನರಿತು ಅದರಂತೆ ನಡೆದುಕೊಳ್ಳಬೇಕು. ೧೪. ಮೋಡವನ್ನು ಕಂಡ ನವಿಲು ಆನಂದದಿಂದ ಸೊಕ್ಕುವಂತೆ ಸತಿಯಾದವಳು ಅನುರಾಗರಸದ ಪ್ರವಾಹದಲ್ಲಿ ಗಂಡಸು ಮನೆಯ ಬಾಗಿಲನ್ನು ಪ್ರವೇಶಿಸಿದನು ಎಂದು ತಿಳಿದ ಕೂಡಲೆ ಎದ್ದು ಬಂದು ಸ್ವಾಗತಿಸ ಬೇಕು. ೧೫. ಸ್ವಲ್ಪವೂ ತಡ ಮಾಡದೆ, ಅಚ್ಯುತನ ಪೂಜೆ ಮಾಡುವ ರೀತಿಯಲ್ಲಿ, ಒಳಗೆ ಬಂದ ಪತಿಯ ಕಾಲು ತೊಳೆದು, ಬಟ್ಟೆಯಿಂದ ಅವುಗಳನ್ನು ಒರಸಿ ದೂರದಿಂದ ಬಂದ ಆತನ ಆಯಾಸಗಳನ್ನು ಒಳ್ಳೆಯ ಸವಿಮಾತಿನಿಂದ ನಿವಾರಿಸಬೇಕು. ೧೬. ಹಸಿವು ಆಲಸ್ಯಗಳನ್ನು ಕಳೆದು ಪಕ್ಕದಲ್ಲಿ ನಾಚಿ ನಿಂತು ಪ್ರೇಮದಿಂದ ಅವನ ಒಲವನ್ನು ಅರಿತು ಏಕಮನಸ್ಸಿನಿಂದ ಅವನನ್ನು ಉಪಚರಿಸಬೇಕು.

ಆವ ಪರಿಯ ದೇಸಿಯಾಣ್ಮಗೆ ಬಗೆವರ್ಪು
ದಾ ವಿಧಗಳನಾರೈದು
ಭಾವಿಸಿ ತಿಳಿದುಟ್ಟು ತೊಟ್ಟು ಬಣ್ಣಿಗೆಯಿಂದ
ಭಾವವ ಬಂದಿಗೊಳುವುದು ೧೭

ಇಷ್ಟದೇವತೆಯಿವನೆಂದು ಪತಿಯೊಳು ವಿ
ಶಿಷ್ಟ ಭಾವವ ಬಗೆಗೊಳಿಸಿ
ಕಷ್ಟ ಕಾರ್ಪಣ್ಯವ ಕಾಣಿಸಿ ಕನಲದೆ
ತುಷ್ಟಿವಡಿಪುದೊಲವರಿತು ೧೮

ಹಿತವಿದು ಶಾಸ್ತ್ರವಿಹಿತವಿದು ಮನಕೆ ಸ
ಮ್ಮತವಿದೆಂದೆಂಬ ಮರ್ಮವನು
ಮತಿಯೊಳೆಣಿಸಿ ಮನದನ್ನನ ಸೇವೆಗು
ಚಿತ ವಸ್ತುಗಳನೆ ಚಿಂತಿಪುದು ೧೯

ಮನೆವಾಳ್ತೆಯೆಸಗುವ ಮರ್ಯಾದೆಯನು ತ
ನ್ನಿನಿಯನಿಗಿಂತೆಂದರುಹಿ
ಮನದೊಲವರಿತೊಡಬಟ್ಟುದನೊಡರಿಸಿ
ಮನಬಾರದುದನು ಮರೆವುದು ೨೦

ಗ್ರಾಸ ವ್ಯಸನ ಪರಿಕರಮಿಲ್ಲದಿರೆ ಕ
ಟ್ಟಾಸುರದೊಳು ಗಾಳುಗೆಡದೆ
ಓಸರಿಸುತ್ತೊಯ್ಯನೇಕಾಂತದೊಳೊಮ್ಮೆ
ಬೇಸರಿಸದೆ ಬಿನ್ನವಿಪುದು ೨೧

೧೭. ಪತಿಗೆ ಯಾವ ಬಗೆಯ ಚೆಲುವು ಇಷ್ಟವೆಂಬುದನ್ನರಿತು ಅದಕ್ಕೆ ತಕ್ಕ ಉಡುಪನ್ನು ಆರಿಸಿ ತೊಟ್ಟು ಆತನ ಮನಸ್ಸನ್ನು ಸೆರೆಹಿಡಿಯಬೇಕು. ೧೮. ಗಂಡನನ್ನು ತನ್ನ ಇಷ್ಟದೇವತೆಯೆಂದು ಭಾವಿಸಿ, ವಿಶಿಷ್ಟ ಭಾವನೆಯಿಂದ ಮನವರಿತು, ಅವನಿಗೆ ತನ್ನ ಯಾವ ಕಷ್ಟಕಾರ್ಪಣ್ಯಗಳನ್ನೂ ತೋರ್ಪಡಿಸದೆ, ತಾನೂ ಅವನ್ನು ಕುರಿತು ಸಂಕಟ ಪಡದೆ ಅವನನ್ನು ತೃಪ್ತಿಪಡಿಸಬೇಕು. ೧೯. 'ಇದೇ ಹಿತ, ಇದು ಶಾಸ್ತ್ರ ಸಮ್ಮತ, ಇದು ಆತನ ಮನಸ್ಸಿಗೆ ಒಪ್ಪುವುದು' ಎಂಬ ರಹಸ್ಯವನ್ನು ಅರಿತು ಮನಃಪ್ರಿಯನ ಸೇವೆಗೆ ಯೋಗ್ಯವಾದ ವಸ್ತುಗಳನ್ನು ಚಿಂತಿಸಬೇಕು. ೨೦. ಸಂಸಾರವನ್ನು ನಿರ್ವಹಿಸುವ ಮರ್‍ಯಾದೆಯನ್ನು ತನ್ನ ಪತಿಗೆ ತಿಳಿಸಿ, ಅವನ ಅಭಿಪ್ರಾಯ ತಿಳಿದು, ಅದರಂತೆ ನಡೆಯಬೇಕು. ಮನಸ್ಸಿಗೆ ಬರದೆ ಇರುವುದನ್ನು ಮರೆತುಬಿಡಬೇಕು. ೨೧. ಅನ್ನ, ಬಟ್ಟೆ, ಸಾಮಾನುಗಳು ಇಲ್ಲದಿದ್ದರೆ ಹೆಚ್ಚಾಗಿ ಜುಗುಪ್ಸೆಪಟ್ಟುಕೊಳ್ಳದೆ, ಸಂಕೋಚದಿಂದ

ಗನ್ನ ಗದುಕುಗಳ ಕಳೆದು ಗರ್ವವ ಬಿಟ್ಟು
ಹನ್ನಸಗಳನು ಹಬ್ಬಿಸದೆ
ತನ್ನ ಬಾಳಿಕೆ ಬಡತನದ ಬಗೆಯನೆಲ್ಲ
ಬಿನ್ನವಿಪುದು ವಿನಯದೊಳು ೨೨

ಮುನಿಯದಿನಿಯನ ಕಡುಮೊನೆವಾತಿಗೆ ನೊಂದು
ಕನಲದೆ ಗಾರುವಡೆಯದೆ
ತನುಮನಗಳ ತನ್ನ ಬಸಗೈದು ದೈನ್ಯವ
ಕೊನರಿಸಿ ತಂಪುಗೊಳಿಪುದು ೨೩

ಪವಣಿಲ್ಲದೆ ಪಲವಗೆ ಮಾತನಾಡದೆ
ಕವೆ ಕೋಡುಗಳನು ಕಾಣಿಸದೆ
ನೆವವಿಲ್ಲದೆ ನೆಗ್ಗಿ ನೆಲಕಿಳಿದೊರಲದೆ
ಸವನಿಸುವುದು ಸಂತಸವನು ೨೪

ಆರಿ ಬೊಬ್ಬರಿ[1]ದಾರಭಟೆ[1]ಯನಾಚರಿಸದೆ
ಪಾರದೆ ಪರಸಹಾಯವನು
ಪೋರದೆ ಪುರ್ಬುಗಂಟಿಕ್ಕದೆ ಪುಸಿಯದೆ
ಸೇರಿ ಸೇವೆಯನೆಸಗುವುದು ೨೫

ಬೇಸರಪಟ್ಟುಕೊಳ್ಳದೆ (ಏಕಾಂತದಲ್ಲಿ) ತಿಳಿಸಬೇಕು. ೨೨. ಮರೆ ಮೋಸಗಳನ್ನು ಬಿಟ್ಟು, ಅಹಂಕಾರವನ್ನು ತ್ಯಜಿಸಿ ಕಿರುಕುಳಗೊಳಿಸದೆ, ವಿನಯದಿಂದ ತನ್ನ ಬಾಳು, ಬಡತನಗಳ ರೀತಿಯನ್ನು ಹೇಳಬೇಕು. ೨೩. ಗಂಡನ ಚುಚ್ಚುಮಾತಿಗೆ ನೋಯದೆ, ಕನಲದೆ, ಕಠಿನವಾಗದೆ, ದೇಹ ಮನಸ್ಸುಗಳನ್ನು ಹತೋಟಿಯಲ್ಲಿಟ್ಟು ಕೊಂಡು ದೈನ್ಯದಿಂದ ತಗ್ಗಿ ಆತನ ಮನಸ್ಸನ್ನು ತಂಪುಗೊಳಿಸಬೇಕು. ೨೪. ಹೊಂದಿಕೆ ಯಾಗದ ಹಲವು ರೀತಿಯ ಮಾತುಗಳನ್ನಾಡದೆ ಮೋಸ ತಟವಟಗಳನ್ನು ತೋರಿಸದೆ, ಕಾರಣವಿಲ್ಲದೆ, ನೆಲದ ಮೇಲೆ ಬಿದ್ದು ಗೋಳಾಡದೆ ಪತಿಗೆ ಸಂತೋಷವನ್ನುಂಟು ಮಾಡಬೇಕು. ೨೫. ಕಿರುಚು ವುದು, ಆರ್ಭಟಿಸುವುದು, ಇನ್ನೊಬ್ಬರ ಸಹಾಯವನ್ನು ಬಯಸುವುದು, ಹೋರಾಡು ವುದು, ಹುಬ್ಬುಗಂಟಿಕ್ಕುವುದು, ಅಸತ್ಯವನ್ನು ನುಡಿಯು ವುದು ಮೊದಲಾದ ರೀತಿಯಲ್ಲಿ ನಡೆದುಕೊಳ್ಳದೆ ಆತನೊಡನೆ ಹೊಂದಿಕೊಂಡು ಅವನ ಸೇವೆ ಮಾಡಬೇಕು.

---

೧. (ಗ) ಆರ್ಭಟೆ.

ನೋಯಿಸಿ ನುಡಿಸದೆ ನೋಡದುಚಿತಗಳ
ಬೀಯವೆಸಗಿ ಬೇಸರಿಸದೆ
ಆಯವರಿತು ತರಲರಿಯದ ಪತಿಯೊಳ
ಸೂಯೆಗೊಳದೆ ಸುಖಿಸುವುದು ೨೬

ಪೆರತೊಂದು ನೆವದೊಳು ಬಿಸುಪೇರಿದ ಕೋಪ
ದುರುಬಿನಿಂದೊದರುವ ಪತಿಗೆ
ತರಿಸಂದು ತಾನಿದಿರುತ್ತರವೀಯದೆ
ಪರದೆಗೆವುದು ಭೀತಿವಡೆದು ೨೭

ಪತಿಯ ಬುದ್ಧಿಗೆ ಮೋಸ ಬಂದೊಡಮದರಿಂದ
ಖತಿಗೊಂಡು ಗಲಗುವಡಿಸದೆ
ಇತರರರಿಯದಂತೇಕಾಂತಸಮಯದೊ
ಳತಿಭಕ್ತಿಯಿಂದರುಹುವುದು ೨೮

ಅನುಚಿತ ಕಾರ್ಯಮನವನೊಡರಿಸೆ ಕಂಡು
ನಿನಗಿದು ನೀತವಲ್ಲೆಂದು
ನೆನೆಯಿಪೆನಲ್ಲದೆ ನೇಮಿಪುದಿಲ್ಲೆಂದು
ವಿನಯವೆರಸಿ ಬಿನ್ನವಿಪುದು ೨೯

೨೬. ನೋಯುವಂತೆ ಮಾತನಾಡದೆ, ಉಚಿತವಾದದ್ದನ್ನು ಗಮನಿಸದೆ, ವ್ಯರ್ಥವಾಗಿ ವೆಚ್ಚಮಾಡಿ ಬೇಸರಪಡಿಸದೆ, ಆದಾಯವನ್ನು ತಿಳಿದು, ತರಲಾರದ ಗಂಡನೊಡನೆ ಅಸಮಾಧಾನಪಟ್ಟುಕೊಳ್ಳದೆ ಸುಖವಾಗಿರುವುದನ್ನು ಕಲಿಯ ಬೇಕು. ೨೭. ಬೇರೆ ಕಾರಣದಿಂದ ಹೆಚ್ಚು ಕೋಪಗೊಂಡು ಗದರಿಸುವ, ಕೂಗಾಡುವ ಗಂಡನಿಗೆ ಪ್ರತ್ಯುತ್ತರವನ್ನು ಕೊಡದೆ ಹೆದರಿಕೆಯಿಂದ ಹಿಂಜರಿಯುವುದೇ ಸೂಕ್ತ. ೨೮. ಪತಿಯ ಬುದ್ಧಿ ಮೋಸಹೋಗಿದ್ದರೆ, ಅದಕ್ಕಾಗಿ ಕೋಪಿಸಿಕೊಳ್ಳದೆ, ಗಲಾಟೆ ಮಾಡದೆ, ಮತ್ತೊಬ್ಬರಿಗೆ ಗೋಚರವಾಗದ ಹಾಗೆ ಏಕಾಂತದಲ್ಲಿ ತುಂಬ ಭಕ್ತಿಯಿಂದ ಅದನ್ನು ತಿಳಿಹೇಳಬೇಕು. ೨೯. ಗಂಡನೇನಾದರೂ ಉಚಿತವಲ್ಲದ ಕಾರ್ಯವನ್ನು ಮಾಡಿದ್ದರೆ ಅದನ್ನರಿತು 'ಇದು ನಿನಗೆ ಯೋಗ್ಯವಾದುದಲ್ಲ ಎಂದು ನಿನ್ನ ನೆನಪಿಗೆ ತಂದು ಕೊಡುತ್ತೇನೆಯೇ ಹೊರತು, ಬೋಧಿಸುತ್ತಿಲ್ಲ' ಎಂದು ವಿನಯದಿಂದ ತಿಳಿಸಬೇಕು.

ಅತಿಭೀತಿಯಿಂದನುಗೆಟ್ಟು ಪಿಂತೆಗೆಯದೆ
ಮಿತಿಮೀರಿ ಮೇಲುವರಿಯದೆ
ಇತರ ಜನರು ತನ್ನನೇಳಿಸಿ ನಗದಂತೆ
ಪತಿಸೇವೆಗೈದು ಬಾಳುವುದು ೩೦

ಪಿರಿಯರ ಮಗಳೆಂದು ಬಿಜ್ಜೆಗಲಿತೆನೆಂದು
ವರರೂಪವತಿ ತಾನೆಂದು
ಪರಮ ಪಾವನೆಯೆಂದು ಬರಿದೆ ಬೆರೆಯದನು
ಸರಿಸುವುದಾತ್ಮವಲ್ಲಭನ ೩೧

ವ್ರತವೆಸಗುವೆನೆಂದು ಮಿಂದು ಬಂದಿಹೆನೆಂ
ದತಿಶಯದಿಂದನುಗೆಡದೆ
ಪತಿಯ ಪಡಿಗ ಪಾವುಗೆಗಳ ಪಿಡಿದು
ನ್ನತಿವಡೆವುದು ನಾರಿಯರು ೩೨

ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ
ಪರಿಚಾರವೆಂದು ಪಳಿಯದೆ
ಪಿರಿದು ಕಿರಿದುಗಳ ಭೇದವೆಣಿಸದೆ
ನಿರವಿಸಿದುದನೆಸಗುವುದು ೩೩

೩೦. ಭಯಪಟ್ಟು ಕ್ರಮತಪ್ಪಿ ಹಿಂಜರಿಯದೆ, ಮಿತಿಮೀರಿ ಮೇಲೆ ಬೀಳದೆ ಇತರರು ತನ್ನನ್ನು ಅಪಹಾಸ್ಯಮಾಡಿ ನಗದಂತೆ ಪತಿಯ ಸೇವೆಯನ್ನು ಮಾಡುತ್ತಾ ಬದುಕಬೇಕು. ೩೧. 'ನಾನು ಮಹಾಪತಿವ್ರತೆ' ಎಂದು ಗರ್ವಪಡದೆ, ತನ್ನ ಗಂಡನನ್ನು ಅನುಸರಿಸಿ ನಡೆಯಬೇಕು. ೩೨. ನಾನು ವ್ರತ ಹಿಡಿದಿದ್ದೇನೆ, ಸ್ನಾನ ಮಾಡಿ ಮಡಿಯಲ್ಲಿದ್ದೇನೆ, ಎಂದು ಅತಿಯಾಗಿ ಬೀಗದೆ ಗಂಡನ ಅವಶ್ಯಕ ಪದಾರ್ಥಗಳನ್ನು (ಪಾತ್ರೆ, ಹಾವುಗೆ ಇತ್ಯಾದಿ) ಒದಗಿಸಿಟ್ಟು ಸ್ತ್ರೀಯರು ಏಳಿಗೆಯನ್ನು ಪಡೆಯಬೇಕು. ೩೩. ಇದು ಗರತಿಯ ಕೆಲಸ ಎಂದು ಉಬ್ಬದೆ, ಇದು ಸೇವಕಳ ಕಾರ್ಯ ಎಂದು ನಿಂದಿಸದೆ, ದೊಡ್ಡದು ಚಿಕ್ಕದು ಎಂಬ ಭೇದವನ್ನೆಣಿಸದೆ ಹೇಳಿದ ಕೆಲಸಗಳನ್ನು ಮಾಡಬೇಕು.

ಮುಡಿಯೊಳು ಪೊತ್ತು ಮುದ್ದಿಸಿದೊಡೇನಡಿಗಳಿಂ
ಪೊಡವಿಗಿಟ್ಟೊರಸಿದೊಡೇನು
ಒಡೆಯನಿಟ್ಟಂತಿರ್ಪುದೊಡವೆಗುಚಿತಮೆಂದು
ನಡೆವುದು ನಲ್ವೆಂಡಿರೊಲಿದು ೩೪

ತನ್ನ ತವರುಮನೆಗೆಲ್ಲ ತಾನೊಡತಿಯೆಂ
ಬುನ್ನತಿವಡೆವುದರಿಂದ
ತನ್ನಿನಿಯನಿಗೂಳಿಗದವಳಪ್ಪುದು ಸಂ
ಪನ್ನತೆಯೆಂದು ಬಗೆವುದು ೩೫

ಆರಯ್ಯ ತಂದೆತಾಯಾದೊಡಮೇನುಪ
ಕಾರಿಗಳಾದೊಡಮೇನು
ಆರಾದೊಡಮಾತ್ಮಪತಿಗಾಗದವರನು
ದೂರಮೆನಿಸಿ ತೊರೆದಿಹುದು ೩೬

ಛಲವಿಡಿದೊಂದನೆಳಸಿ ಚಾರಿವರಿಯದೆ
ನೆಲೆವಿಡಿದೊಂದರೊಳಿರದೆ
ನೆಲೆನಿಂದ ನೀರ ತೆಪ್ಪದ ವೋಲು ತೆಗೆದೆಡೆ
ಗಲೆಗೊಳದನುಸರಿಸುವುದು ೩೭

೩೪. ತಲೆಯಲ್ಲಿಟ್ಟು ಮುದ್ದಿಸಿದರೂ ಕಾಲುಗಳಿಂದ ನೆಲದ ಮೇಲಿಟ್ಟು ಒರೆಸಿದರೂ ಏನಾಯಿತು ? ಒಡೆಯನಿಟ್ಟಲ್ಲಿ ಒಡವೆ ಇರಬೇಕು - ಎಂದು ತಿಳಿದು ಒಳ್ಳೆಯ ಹೆಂಡತಿ ಎನ್ನಿಸಿಕೊಂಡವಳು ನಡೆಯಬೇಕು. ೩೫. ತನ್ನ ತವರಿಗೆ ತಾನೇ ಒಡತಿ ಎಂದು ತಿಳಿಯ ಬೇಕು. ೩೬. ತಂದೆ ತಾಯಿಗಳಾಗಲಿ, ಉಪಕಾರಿಗಳಾಗಲಿ, ಯಾರಾದರೂ ಸರಿಯೆ ತನ್ನ ಗಂಡನಿಗೆ ಆಗದವರನ್ನು ದೂರವಿಡಬೇಕು. ೩೭. ನೆಲೆನಿಂತ ನೀರಲ್ಲಿರುವ ತೆಪ್ಪದಂತೆ ಹಟ ಹಿಡಿದು ಒಂದೇ ರೀತಿಯಲ್ಲಿ ಕಾರ್ಯವನ್ನು ಸಾಧಿಸದೆ ನೆಲಹಿಡಿದು ಒಂದೆಡೆಯೇ ನಿಲ್ಲದೆ, ಅಲೆಗಳಿರುವ ತೆಪ್ಪದಂತೆ ಎಲ್ಲಿಗೆಂದರೆ ಅಲ್ಲಿಗೆ ಹೋಗುವಂತೆ ನಡೆದುಕೊಳ್ಳಬೇಕು.

ಕೊನಬಾದೊಡಮೇನು ಕೂರ್ಮೆಯಾದೊಡಮೇನು
ಬಿನದಮಾದೊಡಮೇನು ಬೇರೆ
ಇನಿಯನೇಕಾಂತದೊಳೆಸಗಿದುದನು ತನ್ನ
ಮನಮೊಳೆ ಮರೆಮಾಜುವುದು ೩೮

ಸೆಜ್ಜೆವನೆಯ ಸೇವೆಯೊಂದನುಳಿದು ಮಿ
ಕ್ಕುಜ್ಜುಗಗೈವ ವೇಳೆಯೊಳು
ಸಜ್ಜಾತಿ ಸತಿಯರಿನಿಯರ ಸನ್ನಿಧಿಯೊಳು
ಲಜ್ಜೆವೆರಸಿ ರಂಜಿಪುದು ೩೯

ಪರದೇವತೆಯೆಂದು ಭಕ್ತಿಗೈವುದು ಬಲು
ದೊರೆಯೆಂದುಪಚರಿಸುವುದು
ಗುರುವೆಂದು ವಿನಯಗೂಡಿರ್ಪುದಿನಿಯನೊಳು
ನೆರವೆಂದು ನೆರೆ ನಂಬುವುದು ೪೦

ಮುಳಿದಲ್ಲಿ ಮುಳಿದೆಳಸಿದುದನೆಳಸಿಯಲ್ಲ
ಗಳೆದುದೆಲ್ಲವನಲ್ಲಗಳೆದು
ಬಳಿವಿಡಿದಿನಿಯರ ಪಾದಾರವಿಂದದ
ನೆಳಲಂತೆ ನೇಮದೊಳಿಹುದು ೪೧

೩೮. ಗಂಡ ಏಕಾಂತದಲ್ಲಿ ಕೋಪಿಸಿಕೊಂಡದ್ದನ್ನಾಗಲಿ ಪ್ರೀತಿಸಿದ್ದನ್ನಾಗಲಿ ವಿನೋದ ಮಾಡಿದ್ದನ್ನಾಗಲಿ ತನ್ನ ಮನಸ್ಸಿನಲ್ಲಿ ಮುಚ್ಚಿಟ್ಟುಕೊಳ್ಳಬೇಕು. ೩೯. ಶಯ್ಯಾಗೃಹದ ಸೇವೆಯೊಂದನ್ನು ಬಿಟ್ಟು ಇತರ ಕಾರ್ಯಗಳನ್ನು ಮಾಡುವ ಕಾಲಗಳಲ್ಲೆಲ್ಲ, ಸತ್ಕುಲ ಪ್ರಸೂತರಾದ ಸತಿಯರು ಗಂಡಂದಿರ ಸಾನ್ನಿಧ್ಯದಲ್ಲಿ ಲಜ್ಜೆಯಿಂದ ನಡೆದು ಕೊಳ್ಳುವುದೇ ಚೆನ್ನ. ೪೦. ಇನಿಯಳಾದವಳು ಅವನೇ ಪರದೈವ ಎಂದು ಭಕ್ತಿ ಇಡಬೇಕು ; ಅವನೇ ಸಮರ್ಥನಾದ ನನ್ನ ಒಡೆಯ ಎಂದು ಉಪಚರಿಸಬೇಕು ; ಅವನೇ ಗುರುವೆಂದು ವಿನಯದಿಂದ ವರ್ತಿಸಬೇಕು ; ಅವನೇ ತನಗೆ ಆಶ್ರಯ ಎಂದು ನಂಬಬೇಕು. ೪೧. ಅವನು ಇತರರ ಮೇಲೆ ಕೋಪಿಸಿಕೊಂಡರೆ ಸತಿಯೂ ಸಹಕರಿಸಿ ಕೋಪಗೊಳ್ಳಬೇಕು, ಅವನು ಅಪೇಕ್ಷಿಸಿದ್ದನ್ನು ಅವಳು ಅಪೇಕ್ಷಿಸ ಬೇಕು, ಅವನು ತ್ಯಜಿಸಿದ್ದನ್ನು ತ್ಯಜಿಸಬೇಕು. ಅವನ ಸಮೀಪವರ್ತಿಯಾಗಿ ಅವನ ಪಾದಕಮಲಗಳನ್ನು ನೆರಳಿನಂತೆ ಅನುಸರಿಸುವ ವ್ರತವನ್ನು ಪರಿಪಾಲಿಸ

ಕೆಳೆಗೊಳ್ಳುವುದು ಸೇವೆಗೈವುದು ನಲ್ಲನ
ಬಳಿ ಸಲುವುದು ಭಜಿಸುವುದು
ಒಳಗುವೇಳುವುದೊಡನಾಡುವುದೊಲಿದೊಲ್ಮೆ
ಗೆಳಸುವುದೇಕವೆನಿಪುದು ೪೨

ಗಣಿಸುವುದವನರಿವೆಯ "ಕೌಶಲಗಳ"
ಗುಣಿಸುವುದನವ ಗುಣಗಳ
ಎಣಿಸುವುದವನೊಲಿದೆಸಗುವ ನಲ್ಮೆಯ
ತಣಿಸುವುದಿಂತು ಚಿತ್ತವನು ೪೩

ಕೇಳುವುದವನ ಕೀರ್ತಿಯನಾಲಿಪರಿಗೆ
ಪೇಳುವುದವನ ಪೆರ್ಮೆಯನು
ಮೇಳಗೊಳುವುದವನೊಳು ಮೇರೆ ಮೀರದೆ
ಬಾಳುವುದಿಂತು ಭಾವೆಯರು ೪೪

ಈ ತೆರದೊಳು ನಡೆದಿನಿಯನ ಮನಕೆ ಸಂ
ಪ್ರೀತಿದೋರಿಸುವ ಪೆಂಡಿರಿಗೆ
ಪಾತಿವ್ರತ್ಯದ ಬಗೆ ಬಣ್ಣವೇರಿ ವಿ
ಖ್ಯಾತಿ ಬೆಳೆದು ಬಿತ್ತರಿಪುದು ೪೫

ಬೇಕು. ೪೨. ಸ್ನೇಹ ಸಂಪಾದಿಸಿ, ಸೇವೆಗೈದು ಗಂಡನೊಡನೆ ಹೊಂದಿಕೊಳ್ಳಬೇಕು. ಅವನನ್ನು ಭಜಿಸಿ ರಹಸ್ಯವನ್ನು ತಿಳಿಸಿ, ಅವನ ಜೊತೆಯಲ್ಲಿ ಆಡಿ, ಅವನ ಪ್ರೇಮವನ್ನು ಸಂಪಾದಿಸಿ ಅವನೂ ತಾನೂ ಒಂದೇ ಎನ್ನಿಸಿಕೊಳ್ಳಬೇಕು. ೪೩. ಅವನ ಬುದ್ಧಿ ಯಿಂದ ಮಾಡುವ ಒಳ್ಳೆಯದನ್ನು ಲೆಕ್ಕಹಾಕ ಬೇಕು. ಈ ರೀತಿಯಲ್ಲಿ ಸಾಧ್ವಿಯಾದವಳು ತನ್ನ ಮನಸ್ಸನ್ನೆ ತೃಪ್ತಿಪಡಿಸಿಕೊಳ್ಳಬೇಕು. ೪೪. ಅವನ ಕೀರ್ತಿಯನ್ನು ಕೇಳಬೇಕು, ಅವನ ಹೆಮ್ಮೆಯನ್ನು ಕೇಳುವವರಿಗೆ ಹೇಳ ಬೇಕು, ಎಲ್ಲೆ ಮೀರಿದಂತೆ ಅವನೊಡನೆ ಸೇರಬೇಕು. ಸಾಧ್ವಿಯರು ಮೇಲ್ಕಂಡಂತೆ ಬಾಳಬೇಕು. ೪೫. ಈ ರೀತಿಯಲ್ಲಿ ನಡೆದುಕೊಂಡು ಇನಿಯನ ಮನಸ್ಸಿಗೆ ಸಂತೋಷಪಡಿಸುವ ಹೆಂಡಿರು ಪಾತಿ

---

೪. (ಗ) ಮಿಗೆ ಲೀಲೆಯ

ತಳುವದಡವಿಯೊಳು ತನ್ನ ತಪ್ಪಿಸಿ ಪೋದ
ನಳನೊಳು ನಲ್ಮೆಯನೆಸಗಿ
ಇಳೆಯ ಪೆಂಡಿರೊಳೆಣೆಯಿಲ್ಲದ ಕೀರ್ತಿಯ
ತಳೆದೆಸೆದಳು ದಮಯಂತಿ ೪೬

ಕಾನನದೊಳು ಕಡುಕಷ್ಟವಡೆದು ನೋವು
ಬೇನೆಗಳಿಗೆ ಬೇಸರಿಸದೆ
ಸಾನುರಾಗದೊಳನುಸರಿಸಿ ತನ್ನಿನಿಯನ
ಜಾನಕಿ ಜಸವ ಪಡೆದಳು ೪೭

ದ್ಯೂತಕೇಳಿಯೊಳಜ್ಞಾತವಾಸದೊಳಂದು
ಧಾತುಗುಂದದೆ ಪಾಂಚಾಲಿ
ಓತು ಪಾಂಡವರನೊಲಿಸಿ ಹದಿಬದೆಯರ
ಬೈತಲೆವಣಿಯೆನಿಸಿದಳು ೪೮

ಇಂತು ವಸಿಷ್ಠನೊಳಿರ್ದಳರುಂಧತಿ
ಇಂತತ್ರಿಯೊಳನಸೂಯೆ
ಇಂತಗಸ್ತ್ಯನೊಳು ಲೋಪಾಮುದ್ರೆ ಪೆರತೇ
ನಿಂತಿರ್ದರೆಲ್ಲ ಸಾಧ್ವಿಯರು ೪೯

ವ್ರತ್ಯದಿಂದ ಕಾಂತಿ ಪಡೆದು ತಮ್ಮ ಖ್ಯಾತಿಯನ್ನು ಎಲ್ಲ ಕಡೆಗೆ ಬೀರುತ್ತಾರೆ. ೪೬. ಕಾಡಿನಲ್ಲಿ ತನ್ನನ್ನು ಬಿಟ್ಟು ಹೋದ ನಳಮಹಾರಾಜನಲ್ಲಿ ದಮಯಂತಿ ಅತಿಶಯವಾಗಿ ಪ್ರೇಮವನ್ನು ತೋರಿಸಿ ಲೋಕದಲ್ಲಿ ಹೆಂಡತಿಯರಲ್ಲೆಲ್ಲ ಅತಿಶಯವಾದ ಕೀರ್ತಿಯನ್ನು ತಳೆದು ಪ್ರಸಿದ್ಧಳಾದಳು. ೪೭. ಅರಣ್ಯದಲ್ಲಿ ನಾನಾ ರೀತಿಯ ಕಷ್ಟಗಳನ್ನನುಭವಿಸಿ, ತನಗುಂಟಾದ ನೋವು ಸಂಕಟಗಳಿಗೆ ಬೇಸರಪಡದೆ, ತನ್ನ ಇನಿಯನಾದ ರಾಮಚಂದ್ರನನ್ನು ಪ್ರೇಮದಿಂದ ಅನುಸರಿಸಿ ಜಾನಕಿ ಕೀರ್ತಿ ಯನ್ನು ಸಂಪಾದಿಸಿದಳು. ೪೮. ಜೂಜಾಟದ ಫಲದಿಂದ ಅನುಭವಿಸಬೇಕಾಗಿ ಬಂದ ಅಜ್ಞಾತವಾಸಕಾಲದಲ್ಲಿ ಸ್ವಲ್ಪವೂ ಧೈರ್ಯಗುಂದದೆ ಪಾಂಡವರನ್ನು ಓಲೈಸಿ ದ್ರೌಪದಿ ಪತಿವ್ರತೆಯರ ಬೈತಲೆಯ ಮಣಿಯಾದಳು. ೪೯. ಇದೇ ರೀತಿಯಲ್ಲಿ ಅರುಂಧತಿ ವಸಿಷ್ಠನಲ್ಲಿ, ಅನಸೂಯೆ ಅತ್ರಿಋಷಿಗಳಲ್ಲಿ, ಲೋಪಾಮುದ್ರೆ ಅಗಸ್ತ್ಯನಲ್ಲಿ ನಡೆದುಕೊಂಡರು. ಎಲ್ಲ ಸಾಧ್ವಿಯರು ನಡೆದುಕೊಳ್ಳುವುದೇ ಹೀಗೆ.

ಇಂತು ನಡೆದು ಪತಿಗಂತರಂಗೆಯರಪ್ಪ
ಕಾಂತೆಯರಿಗೆ ಕಯ್ಯೊಡನೆ
ಸಂತಾನ ಸೌಭಾಗ್ಯ ಸಂಪತ್ತುಗಳನು ಶ್ರೀ
ಕಾಂತನು ಕೈಸೇರಿಸುವನು ೫೦

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಮನ್ನಣೆವಡೆದೆಸೆದುದು ಮೂರನೆಯ ಸಂಧಿ
ಸನ್ನುತ ಗುಣಸಂಬಂಧಿ ೫೧

೫೦. ಹೀಗೆ ನಡೆದು ಪತಿಗೆ ಅಂತರಂಗೆಯರಾದ ಸತಿಯರಿಗೆ ಶ್ರೀಕಾಂತನು ಸಂತಾನ, ಸೌಭಾಗ್ಯ, ಸಂಪತ್ತುಗಳನ್ನು ಪ್ರತ್ಯಕ್ಷವಾಗಿ ಕೊಡುವನು. ೫೧. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ ರಚಿಸಿದ ಕಾವ್ಯದಲ್ಲಿ ಗುಣವಡೆದ ಮೂರನೆಯ ಸಂಧಿ ಶ್ರೇಷ್ಠ ರೀತಿಯಲ್ಲಿ ಮುಕ್ತಾಯವಾಯಿತು.

# ನಾಲ್ಕನೆಯ ಸಂಧಿ

ನಂದನ ಮೋಹದ ನಂದನ ಸನಕ ಸ
ನಂದನವಂದಿತ ಚರಣ
ಮಂದರಧರ ಮಾಧವ ಗೋವಿಂದ ಮು
ಕುಂದದೇವನೆ ಸಲಹೆನ್ನ ೧

ಎಂದೆಂದುಮಿನಿಯನೊಳೆರೆ ಹೊರೆಯಿಲ್ಲದ
ಚಂದದಿಂದೆರ್ದೆಯೊಳು ನಿಂದ
ಇಂದುಸೋದರಿಗಿಂದೀವರಮಂದಿರೆ
ಗಿಂದಿರೆಗಿಂದು ವಂದಿಪೆನು ೨

ಅತ್ತೆ ಮಾವನು ಮೊದಲಾದ ಪೂಜ್ಯರೊಳನು
ವೃತ್ತಿಗೈದಾತ್ಮವಲ್ಲಭನ
ಚಿತ್ತವರಿತು ಸೇವೆಯೆಸಗುವ ಸತಿಯರ
ವೃತ್ತವ ಬಿತ್ತರಿಸುವೆನು ೩

ತನ್ನ ಪೆತ್ತವರು ಮಿಗಿಲು ತನ್ನವರೊಳು
ತನ್ನ ಪೆತ್ತವರಿಗೆ ಮಿಗಿಲು
ತನ್ನಿನಿಯನ ಪೆತ್ತವರೆಂದವರನು
ಮನ್ನಿಸುವುದು ಮರುಕದೊಳು ೪

೧. ನಂದಕುಮಾರನಾದ, ಸನಕ ಸನಂದರಿಂದ ನಮಸ್ಕೃತನಾದ ಸುಂದರ ಪರ್ವತವನ್ನು ಎತ್ತಿದ ಮಾಧವ, ಗೋವಿಂದ, ಮುಕುಂದ ! ನನ್ನನ್ನು ಕಾಪಾಡು. ೨. ಯಾವತ್ತಿಗೂ ಪ್ರಿಯನಲ್ಲಿ ತನ್ನ ಪ್ರಭುತ್ವದ ಹೊರೆಯನ್ನಿರಿಸದೆ ಸೌಂದರ್ಯದಿಂದ ವಿಷ್ಣುವಿನ ಹೃದಯದಲ್ಲಿ ನಿಂತ, ಚಂದ್ರನ ತಂಗಿಯಾದ, ಕಮಲಮಂದಿರೆಯಾದ ಇಂದಿರೆಗೆ ನಮಸ್ಕರಿಸುತ್ತೇನೆ. ೩. ಅತ್ತೆ, ಮಾವ ಮೊದಲಾದ ಪೂಜ್ಯರನ್ನು ಅನುಸರಿಸುತ್ತಾ ಪತಿಯ ಮನಸ್ಸನ್ನರಿತು ಸೇವೆಮಾಡುವ ಸತಿಯರ ಚರಿತ್ರೆಯನ್ನು ವಿಸ್ತರಿಸಿ ಹೇಳುತ್ತೇನೆ. ೪. ತನ್ನ ಬಂಧುಬಳಗದಲ್ಲಿ ತನ್ನನ್ನು ಹೆತ್ತವರು ದೊಡ್ಡವರು, ಹೆತ್ತವರಿಗಿಂತ ತನ್ನ ಗಂಡನನ್ನು ಹೆತ್ತವರು ಇನ್ನೂ ದೊಡ್ಡವರು- ಹೀಗೆ ಅರಿತು ಅವನ್ನು ಗೌರವಿಸ

ಗಂಡನ ಬಲ್ಮೆಯೊಳತ್ತೆಮಾವಂದಿರ
ಗಂಡನನವರ ಬಲ್ಮೆಯೊಳು
ಅಂಡಲೆಯದೆಯನಿಬರನನುಸರಿಸುವ
ಪೆಂಡಿರ ಜಸ ಪೆರ್ಚುವುದು ೫

ಅತ್ತೆಮಾವಂದಿರೊಳಡಕಮೆನಿಸಿ ಪತಿ
ಚಿತ್ತದಿರವ ಸೆರೆಗೊಂಡು
ಪೆತ್ತ ತಾಯನು ಪೆಸರೆನಿಸುವುದಿಳೆಯೊಳ
ಗುತ್ತಮನಾರಿಯರೊಲಿದು ೬

ಎಂತು ಕಾಪಿಟ್ಟೊಡಮೇನ ಬೆಸಸಿದೊಡ
ಮಂತರಂಗದೊಳನುಗೆಡದೆ
ಚಿಂತಿಸಿಯಳಲದೆ ಸಿಡಿಮಿಡಿಗೊಳದತಿ
ಸಂತೋಷದೊಳು ಸಮ್ಮತಿಪುದು ೭

ಪೊತ್ತುಪೊತ್ತಿಗೆ ಪೋಗಿ ಪೊಡಮಟ್ಟು ನಸು ತಲೆ
ಗುತ್ತಿ ನಾಣ್ಚುತ ನಲವಿನೊಳು
ಒತ್ತಿನೊಳುಪಚರಿಸುತ್ತಿರ್ದವರೊಲಿ
ದಿತ್ತುದರಿಂದ ತಣಿವುದು ೮

ಉತ್ತರಕುತ್ತರವಿತ್ತಿದಿರಾಡದೆ
ಒತ್ತಿನುಡಿಯದೊತ್ತರಿಸದೆ
ಮತ್ತವರಿತ್ತಾಣತಿಯ ಮಸ್ತಕದೊಳು
ಪೊತ್ತು ಪೂಜಿಸುತೆಸಗುವುದು ೯

ಬೇಕು. ೫. ಗಂಡನ ಬಲದಿಂದ ಅತ್ತೆಮಾವಂದಿರನ್ನೂ, ಅವರ ಬಲದಿಂದ ಗಂಡನನ್ನೂ ಪೀಡಿಸದೆ ಎಲ್ಲರನ್ನೂ ಅನುಸರಿಸುವ ಹೆಂಡಂದಿರ ಕೀರ್ತಿ ಹೆಚ್ಚುತ್ತದೆ. ೬. ಅತ್ತೆ ಮಾವಂದಿರಿಗೆ ವಿಧೇಯಳಾಗಿ, ಗಂಡನ ಮನಸ್ಸನ್ನರಿತು (ಅದನ್ನು) ಸೆರೆಹಿಡಿದು ಹೆತ್ತ ತಾಯಿಯ ಕೀರ್ತಿಯನ್ನು ಉತ್ತಮವಾದ ಸ್ತ್ರೀಯರು ಬೆಳಗಿಸಬೇಕು. ೭. ಎಷ್ಟೇ ಕಷ್ಟ ಕೊಟ್ಟರೂ ಏನೇ ಅಪ್ಪಣೆಮಾಡಿದರೂ ಮನಸ್ಸಿನಲ್ಲಿ ಕ್ರಮತಪ್ಪದೆ, ದುಃಖಿಸಿ ಅಳದೆ, ಕೋಪಿಸಿಕೊಳ್ಳದೆ ಅತ್ಯಂತ ಆನಂದದಿಂದ ಅವುಗಳನ್ನು ಸಹಿಸಿಕೊಳ್ಳಬೇಕು. ೮. ಹೊತ್ತು ಹೊತ್ತಿಗೆ ಹೋಗಿ ನಮಸ್ಕರಿಸಿ, ತಲೆಬಾಗಿ, ನಾಚುತ್ತ ಸಮೀಪವರ್ತಿಯಾಗಿ ನಿಂದು ಉಪಚರಿಸುತ್ತ ಅವರು ನೀಡಿದ್ದನ್ನು ಸ್ವೀಕರಿಸಿ ತೃಪ್ತಿಪಟ್ಟುಕೊಳ್ಳಬೇಕು. ೯. ಉತ್ತರಕ್ಕೆ ಉತ್ತರಕೊಟ್ಟು ಎದುರಾಡದೆ, ಕರ್ಕಶವಾಗಿ ಮಾತನಾಡದೆ, ಬಲವಂತ ಪಡಿಸದೆ, ಅವರು ನೀಡಿದ ಅಪ್ಪಣೆಯನ್ನು ತಲೆಯಲ್ಲಿ ಧರಿಸಿ ಪೂಜಿಸುತ್ತಾ ನಡೆದುಕೊಳ್ಳಬೇಕು.

ಅತ್ತಿತ್ತ ನೋಡದೆ ಅವಮತಿಗೈಯದೆ
ಮತ್ತೆಯಾಗದೆ ಮರೆತಿರದೆ
ಅತ್ತೆಮಾವಂದಿರಾಣತಿಯನಾಲಿಪುದೇಕ
ಚಿತ್ತದೊಳೇಕಪತ್ನಿಯರು ೧೦

ಕೂಗಿ ನಡೆಯದೆ ಕೊಬ್ಬದೆ ಕೋಪವೆಸಗದೆ
ಮೂಗುವಡದೆ ಮೋಡಿಗೊಳದೆ
ಲೋಗರುಚಿತಮೆನಲೊಯ್ಯನೊಯ್ಯನೆಯನು
ವಾಗಿ ನುಡಿದವರೊಡನೆ ೧೧

ಮುದುಪರರಿಯರೆಂದು ಮುಂದುಗೆಟ್ಟಾಡದೆ
ಚದುರರಲ್ಲೆಂದು ಜರೆಯದೆ
ಇದು ಹಿತವೆಂದವರಿತ್ತುಪದೇಶವ
ನೆದೆಗೊಳಿಸುವುದೆಸಗುವುದು ೧೨

ಪಾಡುವಡಿಪರೆಂದು ಪರಿಹರಿಸದೆ ಚುನ್ನ
ವಾಡದೆ ಮನೆವಾಳ್ತೆಯನು
ಮಾಡುವುದವರ ಸಮ್ಮತದಿಂದ ಸತಿಯರೊ
ಳೀಡುಜೋಡಿಲ್ಲೆನಿಸುವುದು ೧೩

೧೦. ಆ ಕಡೆ ಈ ಕಡೆ ಗಮನ ಹರಿಸದೆ, ಅನುಮಾನವಾಗುವಂತೆ ನಡೆದು ಕೊಳ್ಳದೆ, ಮೈಮರೆಯದೆ, ಯಾವುದನ್ನೂ ಮರೆಯದೆ ಅತ್ತೆಮಾವಂದಿರ ಅಜ್ಞೆಯನ್ನು ಒಮ್ಮನಸ್ಸಿನಿಂದ ಏಕಪತ್ನಿಯರು ಕೇಳಬೇಕು. ೧೧. ದೊಡ್ಡ ಗಂಟಲಿನಿಂದ ಕೂಗದೆ, ಕೊಬ್ಬದೆ, ಕೋಪಿಸದೆ, ಮೌನಿಯಾಗದೆ, ಗರ್ವಪಡದೆ, ಜನ 'ಯೋಗ್ಯ' ಎಂದು ಹೇಳುವ ರೀತಿಯಲ್ಲಿ ಮೆದುವಾಗಿ ಅನುವಾಗಿ ಅವರ ಜೊತೆಯಲ್ಲಿ ಮಾತನಾಡಬೇಕು. ೧೨. 'ಮುದುಕರು ಅವರಿಗೆ ಏನೂ ತಿಳಿಯದು' ಎಂಬ ಧೋರಣೆಯಿಂದ ಮಾತನಾಡ ಬಾರದು. 'ಅವರು ಜಾಣರಲ್ಲ' ಎಂದು ಜರಿಯಬಾರದು. 'ಅವರು ಹೇಳುವುದು ನಮಗೆ ಹಿತ' ಎಂದು ಭಾವಿಸಿ ಅವರು ತಿಳಿಯ ಹೇಳಿದ ಹಿತೋಕ್ತಿಯನ್ನು ಮನಸ್ಸಿಗೆ ತಂದುಕೊಂಡು ಅದರಂತೆ ನಡೆಯುವುದು. ೧೩. 'ಕಷ್ಟ ಕೊಡುತ್ತಾರೆ' ಎಂದು ಅವರು ಹೇಳಿದ್ದನ್ನು ಮಾಡದೆ, ಸುಳ್ಳು ಹೇಳದೆ, ಸಂಸಾರವನ್ನು ಅವರ ಮನಸ್ಸಿಗೆ ಒಪ್ಪುವಂತೆ ನಿರ್ವಹಿಸಿ, ಸಾಧ್ವಿಯರಿಗೆ ಸಮಾನರಾದವರು ಮತ್ತಾರೂ ಇಲ್ಲವೆಂದು ತೋರಿಸಬೇಕು.

ಮಾನಗೊಳದೆ ಮೈಲಿಗೆಯೆಂಜಲೆಂದನು
ಮಾನಗಯ್ಯದೆ ಮನವೊಲಿದು
ಬೇನೆಬದ್ದಿರೆ ಪೇಸದೆ ಬೇಸರದೆ ಸ
ನ್ಮಾನದೊಳುಪಚರಿಸುವುದು ೧೪

ಹಮ್ಮುಗೊಳದೆ ಹದವಳಿಯದೆ ಮಾವನ
ಸಮ್ಮುಖದೊಳು[1] ಮಂಡಿಸದೆ[1]
ಹೆಮ್ಮೆವಾತಾಡದೆ ಹೆಕ್ಕಳಿಸದೆ ಚಿತ್ತ
ಸಮ್ಮತಿಯರಿತೆಸಗುವುದು ೧೫

ಆವ ವೇಳೆಯೊಳಾವುದ[2]ನುಗೊಳ[2]ಲೆಳಸಿದ
ರಾ ವೇಳೆಯೊಳವನೆಲ್ಲ
ಸಾವಧಾನದೊಳು ಸಂಗತಿಗೊಳಿಸುವುದಿಷ್ಟ
ದೇವತೆಯೆಂದೆಣಿಸುವುದು ೧೬

ಒತ್ತಿನೊಳಿದ್ದೊಲವರಿತಡಿಗಳನೊಯ್ಯ
ನೊತ್ತುವುದೊಂದುವೆರೆವುದು
ಸುತ್ತುಗೆಲಸವ ಸೊಲ್ಲಿಸದೆಸಗುವುದಿಂ
ತತ್ತೆಯನನುವರ್ತಿಸುವುದು ೧೭

೧೪. ಮರ್ಯಾದೆಗೆ ಕಡಮೆ ಎಂದು ಭಾವಿಸದೆ, ಇದು ಹೊಲಸು ಎಂಜಲು ಎಂದು ಅಸಹ್ಯಪಟ್ಟುಕೊಳ್ಳದೆ ಮನಃಪೂರ್ವಕವಾಗಿ, ಅವರು ಅನಾರೋಗ್ಯವಾಗಿದ್ದಾಗ ಬೇಸರ ಪಡದೆ ಉಚಿತವಾಗಿ ಗೌರವದಿಂದ ಅವರನ್ನು ಉಪಚರಿಸಬೇಕು. ೧೫. ಗರ್ವಪಡದೆ, ಕ್ರಮತಪ್ಪದೆ, ಮಾವನ ಎದುರಿಗೆ ಕುಳಿತುಕೊಳ್ಳದೆ, ಜಂಬದ ಮಾತನ್ನಾಡದೆ, ಹೆಚ್ಚುಗಾರಿಕೆಯನ್ನು ತೋರಿಸದೆ ಅವರ ಮನಸ್ಸನ್ನರಿತು ನಡೆಯಬೇಕು. ೧೬. ಯಾವ ಹೊತ್ತಿನಲ್ಲಿ ಯಾವುದನ್ನು ಮಾಡಬೇಕು ಎಂದು ಬಯಸಿದರೆ ಆ ಹೊತ್ತಿನಲ್ಲಿ ಅದನ್ನು ಸಮಾಧಾನದಿಂದ ಮಾಡಬೇಕು. ಮಾವನನ್ನು ಇಷ್ಟದೇವತೆಯೆಂದು ಪರಿಭಾವಿಸಬೇಕು. ೧೭. ಹತ್ತಿರದಲ್ಲಿಯೇ ಇದ್ದುಕೊಂಡು ಶ್ರದ್ಧೆ ವಿಶ್ವಾಸಗಳಿಂದ ಅತ್ತೆಯ ಪಾದಗಳನ್ನು ಒತ್ತುತ್ತ ಆಕೆಯೊಡನೆ ಒಂದಾಗಿ ಇರುವುದನ್ನು ಕಲಿಯಬೇಕು. ಮನೆಯ ಸುತ್ತುಗೆಲಸವನ್ನು ಗೊಣಗದೆ ಮಾಡುತ್ತ ಅತ್ತೆಯನ್ನು ಅನುಸರಿಸಿ ನಡೆಯಬೇಕು.

---

೧. (ಗ) ವಾದಿಸದೆ. ೨. (ಕ) ನುಣ.

ಬೀಸುವುದೊಮ್ಮೆ ಪಿಡಿದು ಬಿಜ್ಜಣಿಗೆಯ
ಪಾಸುವುದೊಮ್ಮೆ ಪಾಸಿಗೆಯ
ಸೂಸುವುದೊಮ್ಮೆ ಪನ್ನೀರ ಸುಗಂಧವ
ಪೂಸುವುದೊಮ್ಮೆ ಪೂಜುವುದು ೧೮

ತಾನೆ ನೀರೆರೆದು ಮೀಯಿಸುವುದು ಮತ್ತೊಮ್ಮೆ
ತಾನೆ ತೊಡಿಗೆ ತೊಡಿಸುವುದು
ಏನೆಸಗುವೆನೆಂದಿದಿರೊಳಿದ್ದೆಲ್ಲವ
ಸಾನಂದದೊಳು ಸಮನಿಪುದು ೧೯

ಉಡುಗೆ ತೊಡುಗೆಯೂಟ ಮೀಹದೊಳತಿಶಯ
ವಡುವೆನೆಂದೊಡಲು ಮರೆಯದೆ
ಪಡಿಯಹೆನೆಂದು ಬರೆಯದವರಿಗೆ ತಾನು
ಕಡಿಮೆಯೆನಿಸಿ ಕಾಣಿಸುವುದು ೨೦

ಕುತ್ತವೆಣಿಸಿ ಕೋಪಗೊಳದೆ ಕೂರ್ತಿವರೆಮ್ಮ
ತೆತ್ತಿಗರೆಂದೆರ್ದೆಗೊಳಿಸಿ
ಅತ್ತಿಗೆ ನಾದಿನಿಯರೊಳಂತರಂಗವ
ಪತ್ತುಗೆಗೊಳಿಸಿ ಬಾಳುವುದು ೨೧

೧೮. ಬೀಸಣಿಗೆಯಿಂದ ಗಾಳಿ ಹಾಕುವುದು, ಹಾಸಿಗೆಯನ್ನು ಹಾಸಿಕೊಡುವುದು, ಪನ್ನೀರನ್ನು ಚೆಲ್ಲುವುದು, ಗಂಧವನ್ನು ಹಚ್ಚುವುದು ಗೌರವದಿಂದ ಕಾಣುವುದು ಮೊದಲಾಗಿ ಅತ್ತೆಯ ಸೇವೆ ಸಲ್ಲಿಸುವುದು ಸಾಧ್ವಿಯರ ಕರ್ತವ್ಯ. ೧೯. ತಾನೇ ತನ್ನ ಕೈಯಿಂದ ನೀರು ಹಾಕಿ ಅತ್ತೆಗೆ ಸ್ನಾನ ಮಾಡಿಸಬೇಕು. ತಾನೆ ಆಕೆಗೆ ಬಟ್ಟೆ ತೊಡಿಸಬೇಕು. ಆಕೆಯ ಎದುರಿಗೇ ಇದ್ದು ಏನು ಬೇಕು, ಏನು ಮಾಡಬೇಕು ಎಂದು ಕೇಳುತ್ತ ಆಕೆ ಹೇಳಿದ ಕೆಲಸವನ್ನೆಲ್ಲ ಆನಂದದಿಂದ ನಡಸಿಕೊಡುವುದು ಆವಶ್ಯವಾದುದು. ೨೦. ವಸ್ತ್ರ, ಆಭರಣ, ಊಟ, ಸ್ನಾನ ಇವುಗಳಲ್ಲೇ ಮಗ್ನಳಾಗಿ ಮೈಮರೆಯದೆ, ಅತ್ತೆಗೆ ತಾನು ಪ್ರತಿಸ್ಪರ್ಧಿ ಎಂದು ಭಾವಿಸದೆ ಅವರಿಗಿಂತ ತಾನು ಕಡಮೆ ಎಂದು ತೋರಿಸಿಕೊಳ್ಳಬೇಕು. ೨೧. ರೋಗ ರುಜಿನಾದಿಗಳ ನೆಪಹೇಳದೆ, ಕೋಪಿಸಿಕೊಳ್ಳದೆ ಪ್ರೀತಿಯಿಂದ ಇವರು ನಮ್ಮ ಬಂಧುಗಳು ಎಂದು ವಿಶ್ವಾಸದಿಂದ ಅತ್ತಿಗೆ ನಾದಿನಿಯರ ಮನಸ್ಸನ್ನು ಹಂಚಿ

ಅಂದಂದಿಗಿನಿಯನ ಮೆಯ್ಯಾರೈಕೆಯ
"ನೆಂದೆಂದಿಗು[೩] ಬೇಸರದೆ
ಒಂದೆ ನಾವೆಯೊಳೇರಿದವರಂತೆ ಸವತಿಯ
ರೊಂದೆನಿಸಿರ್ಪುದೊಪ್ಪದೊಳು ೨೨

ಪೋರದೆ ಪುರುಡಿಸದೊರ್ವರೊಳನು
ಸಾರಮೆನಿಸಿ ಸಮ್ಮತದೊಳು
ಓರಗೆಗೆಳದಿಯರೊಂದುವೆರಸುವಂ
ತೋರಗಿತ್ತಿಯರೊಂದಿಹುದು ೨೩

ತಂದೆ ತಾಯನು ಬಿಟ್ಟು ತನ್ನ ಕೈಗೆಡೆಯಾಗಿ
ಬಂದ ಸೊಸೆಯರ ಬಾಧಿಸದೆ
ಅಂದಂದಿಗುಡಿಗೆ ತೊಡಿಗೆಯೂಟ ಮೀಹಗ
ಳಿಂದ ಸಂತಸಗೊಳಿಸುವುದು ೨೪

ಬಸವಳಿಸದೆ ಪಳಿಯದೆ ಭಂಗವಡಿಸದೆ
ಹಸಗೆಡಿಸದೆ ಹುದುಗಿಸದೆ
"ಬಸಿರೊಳು[೪] ಬಂದ ಪೆಣ್ಮಕ್ಕಳ ಮರುಕವ
ಸೊಸೆಯರೆಡೆಯೊಳೆಸಗುವುದು ೨೫

ಕೊಂಡು ಸಾಧ್ವಿಯು ಬಾಳಬೇಕು. ೨೨. ಪ್ರತಿದಿನವೂ ಪತಿಯ ದೇಹದ ಸೇವೆಯನ್ನು ಬೇಸರಿಸದೆ ಮಾಡುತ್ತ ತನ್ನ ಸವತಿಯರೊಡನೆ, ತಾವೆಲ್ಲರೂ ಒಂದೇ ದೋಣಿಯಲ್ಲಿ ಕುಳಿತವರಂತೆ ಭಾವಿಸಿ ಒಪ್ಪದಿಂದ ನಡೆದುಕೊಳ್ಳಬೇಕು. ೨೩. ಹೋರಾಡದೆ, ತನ್ನ ಜೊತೆಯ ಸಖಿಯರೊಡನೆ ಕೂಡಿ ಸವತಿಯರು ಹೊಂದಿಕೊಂಡಿರಬೇಕು. ೨೪. ತಾಯಿ ತಂದೆಗಳನ್ನು ಬಿಟ್ಟು ತನ್ನ ರಕ್ಷಣೆಗೆ ಬಂದ ಸೊಸೆಯಂದಿರಿಗೆ ತೊಂದರೆ ಕೊಡದೆ, ಊಟ, ಬಟ್ಟೆ, ಒಡವೆಗಳನ್ನು ಕೊಟ್ಟು ಅವರನ್ನು ಸಂತೋಷ ಪಡಿಸುವುದು ಅತ್ತೆಯಾದ ಸಾಧ್ವಿಯ ಕೆಲಸ. ೨೫. ಆಯಾಸಪಡಿಸದೆ, ನಿಂದಿಸದೆ, ಅವಮಾನ ಮಾಡದೆ ಅಂದಗೆಡಿಸದೆ, ಕುಗ್ಗಿಸದೆ, ಹೊಟ್ಟೆಯಲ್ಲಿ ಹುಟ್ಟಿದ ಹೆಣ್ಣು ಮಕ್ಕಳ ಮೇಲೆ ತೋರಿಸುವ ವಾತ್ಸಲ್ಯದಿಂದಲೇ ಸೊಸೆಯಂದಿರನ್ನು ಕಾಣಬೇಕು.

---

೩. (ಖ) ಪಿಂದೆಗೆಯದೆ ೪. (ಖ) ಬಸುರೊಳು

ಬಸಿರ ನಿಟ್ಟಸಿಯುಣಬಡಿಸುವುದೊಳುಮುಡಿ
ಯೆಸಕವರಿತು ಮೀಯಿಸುವುದು
ಒಸೆದು ಸಿಂಗರಿಸುವುದೊಲಿದು ನೋಡುವುದಿಂತು
ಸೊಸೆಯರ ಸುಖಬಡಿಸುವುದು ೨೬

ಒಲಿದು"ಬಸಿರಿ" ಯಾವಾವುದ ಬಯಸುವ
ಳಲಸದೆಯವನೆಲ್ಲವನು
ಪಲವಗೆಯೊಳು ಪವಣಿಸಿಯವಳಿಚ್ಛೆಯ
ಸಲಿಸಿ ಸಂತಸಗೊಳಿಸುವುದು ೨೭

'ಅಲೆಗೈವ ಬಗೆಯನರುಹಿ ತಂದೆ ತಾಯನು
ಪಲಬಗೆಯೊಳು ಬಳಲಿಸದೆ
ನಲವಿನೊಳಿನಿಯನ ನಲ್ಮೆಯನೊರೆವುದು
ಕುಲದೊಳೊಗೆದ ಕುವರಿಯರ' ೨೮

ಅಕ್ಕತಂಗಿಯರಣ್ಣ ತಮ್ಮಂದಿರು 'ತಮ್ಮ'
ಮಕ್ಕಳು ಮೊಮ್ಮಕ್ಕಳೊಳು
ಕಕ್ಕಸಗೊಂಡು ಕನಲಿ ಕಾದದೆ ಮಿಗೆ
ಯಕ್ಕರನನುಗೊಳಿಸುವುದು ೨೯

೨೬. ಸೊಸೆಯರನ್ನು ಸುಖವಾಗಿ ನೋಡಿಕೊಳ್ಳುವುದು ಅತ್ತೆಯರ ಕರ್ತವ್ಯ. ಆಕೆಗೆ ಹೊಟ್ಟೆ ತುಂಬುವಂತೆ ಊಟ ಮಾಡಿಸಬೇಕು, ಗರ್ಭಿಣಿಯಾದುದನ್ನು ಗಮನಿಸಿ ಬಡಿಸಬೇಕು, ಸಮಯವರಿತು ಸ್ನಾನ ಮಾಡಿಸಬೇಕು, ಪ್ರೀತಿಯಿಂದ ಅಲಂಕರಿಸ ಬೇಕು. ಗರ್ಭಿಣಿಯಾದ ಸೊಸೆಯನ್ನು ವಿಶ್ವಾಸದಿಂದ ನಡೆಸಿಕೊಳ್ಳಬೇಕು. ೨೭. ಗರ್ಭಿಣಿಯಾದ ಸೊಸೆ ಏನೇನು ಬಯಸುತ್ತಾಳೆ - ಅವನ್ನೆಲ್ಲ ಬೇಸರಪಟ್ಟು ಕೊಳ್ಳದೆ, ಹಲವು ರೀತಿಯಿಂದ ಒದಗಿಸಿ ಆಕೆಯ ಅಪೇಕ್ಷೆಯನ್ನು ಪೂರೈಸಿ ಸುಖ ಸಂತೋಷಗಳನ್ನು ನೀಡಬೇಕು. ೨೮. ಗಂಡನು ತನ್ನನ್ನು ಪೀಡಿಸುವ ತಾಯಿ ತಂದೆಗಳಿಗೆ ತಿಳಿಸಿ ಅವನ್ನು ವಿವಿಧ ರೀತಿಯಿಂದ ಬಳಲಿಸದೆ, ಪ್ರೀತಿಯಿಂದ ತನ್ನ ಪ್ರಿಯ ಪತಿಯ ಪ್ರೇಮದ ರೀತಿಯನ್ನು ಕುಲಸ್ತ್ರೀಯರು ತಿಳಿಸಬೇಕು. ೨೯. ಅಕ್ಕ, ತಂಗಿ, ಅಣ್ಣ, ತಮ್ಮ ಅವರವರ ಮಕ್ಕಳು, ತನ್ನ ಮಕ್ಕಳು, ಮೊಮ್ಮಕ್ಕಳು ದುಷ್ಟತನದಿಂದ ಕೋಪಗೊಂಡು ಪರಸ್ಪರ ಕಾದಾಡದ ಹಾಗೆ ನೋಡಿಕೊಂಡು ಎಲ್ಲೆಡೆಗೆ ಪ್ರೀತಿಯನ್ನೇ ಬಳಸಿ ಸಂಸಾರ ಅನುಕೂಲವಾಗಿರುವಂತೆ ನೋಡಿಕೊಳ್ಳುವುದು ಆಕೆಯ ಕರ್ತವ್ಯ.

---

೫. (ಖ) ಬಸುರಿ (ಗ) ಪ್ರತಿಯಲ್ಲಿ ಈ ಪದ್ಯ ಇಲ್ಲ. ೭. (ಖ) ತನ್ನ

ತಾಯ ತಂದೆಯ ದೆಸೆ ಗಂಡನ ದೆಸೆಯಂ
ಬೀಯೆರಡಿರವಿನೊಳೆಸೆವ
ಕಾಯ ಬಾಂಧವರ ಕಣ್ಣೆರಡೆಂದು ಕಾಂಬುದ
ಸೂಯೆಗೊಳದೆ ಸುಖಿಸುವುದು ೩೦

ಬುದ್ಧಿಗಲಿಯಲರಿಯದಧ ಪಸುಮಕ್ಕಳ
ಮುದ್ದಿಸಿ ಮುದವೇರುವುದು
ಬುದ್ಧಿಗಲಿವ ಕಾಲದೊಳು ಪೊಯ್ದು ಬಯ್ದು ನ
ಲ್ಬುದ್ಧಿಗಳನೆ ಬೋಧಿಸುವುದು ೩೧

ಓದುಗಲಿವ ಮಕ್ಕಳಿಗೂಟ ಮೀಹವ
ನಾದರದಿಂದನುಗೊಳಿಸಿ
ಓದಿಸುವರು ಕೊಂಡು ಬಯ್ದೊಡಮವರನು
ಮೂದಲಿಸದೆ ಸಮ್ಮತಿಪುದು ೩೨

ಬಸಿರೊಳು ಬಂದ ಕುವರನಾದೊಡಮೇನು
ಪೊಸವರೆಯದ ಪುರುಷನನು
ಒಸೆದು ನಿಟ್ಟಸಿಯೊಡಲೋಜೆಯೊಳ್ಪುಗಳ ಬ
ಣ್ಣಿಸಲಾಗದು ಭಾವೆಯರು ೩೩

೩೦. ತಾಯಿತಂದೆಯರ ಕಡೆಯವರೆಂದೂ, ಗಂಡನ ಕಡೆಯವ ರೆಂದೂ ಬರುವ ನೆಂಟರನ್ನು ತನ್ನ ಎರಡು ಕಣ್ಣುಗಳಂತೆ ತಿಳಿಯಬೇಕು. ಅಸೂಯೆ ಪಡದೆ ಅವರೊಡನೆ ನಡೆದುಕೊಂಡು ಸಂತೋಷಿಸಬೇಕು. ೩೧. ಬುದ್ಧಿ ಹೇಳಿದರೆ ತಿಳಿದುಕೊಳ್ಳಲರಿಯದ ಹಸುಮಕ್ಕಳನ್ನು ಮುದ್ದಿಸಿ, ಅವರಿಗೆ ಸುಖವನ್ನು ಕೊಟ್ಟು ಸಂತೋಷಪಡಿಸಿ ವಿದ್ಯೆ ಕಲಿಸಬೇಕು. ಬುದ್ಧಿ ಕಲಿಯುವ ಕಾಲದಲ್ಲಿ ತಪ್ಪಿದರೆ, ಹೊಡೆದು ಬಯ್ದು ಒಳ್ಳೆಯ ಬುದ್ಧಿಯನ್ನು ಕಲಿಸುವುದು ಅವಳ ಕೆಲಸ. ೩೨. ಓದುವ ಮಕ್ಕಳಿಗೆ ಕಾಲಕಾಲಕ್ಕೆ ಸ್ನಾನ, ಊಟಗಳನ್ನು ಸಿದ್ಧಪಡಿಸಿ, ಪಾಠ ಕಲಿಸುವ ಉಪಾಧ್ಯಾಯರು ಮಕ್ಕಳನ್ನು ಶಿಕ್ಷಿಸಿದರೆ ಅದನ್ನು ಆಕ್ಷೇಪಿಸಿದೆ ಅವರನ್ನು ಅನುಮೋದಿಸಬೇಕು. ೩೩. ಹೊಟ್ಟೆಯಲ್ಲಿ ಹುಟ್ಟಿದ ಮಗನಾದರೂ ವಯಸ್ಸಿಗೆ ಬಂದಾಗ ಅವನು ಹೊಸ ಹರೆಯದ ಗಂಡಸು ಎಂದು ಭಾವಿಸಿ ಅವನನ್ನು ಪ್ರೀತಿಯಿಂದ ದೃಷ್ಟಿಸಿ ನೋಡಬಾರದು ; ಅವನ ಮೈಕಟ್ಟನ್ನೂ

ಗುರುಪಿರಿಯನು ತಂದೆ ಸೋದರನಣುಗನು
ಪೊರೆವರಸಾದೊಡಮೇನು
ಬರಿಸ ಪನ್ನೆರಡಾದ ಬಳಿಕಾರೊಳಮೊಂದು
ವೆರಸದೆ ಪೆರದೆಗೆದಿಹುದು ೩೪

ಪಸಿದು ಬಳಲಿ ಪರದೇಸಿ "ಬಾಯ್ವಿಡೆ" ಕಂ
ಡಸಮಯವೆಂದಬ್ಬರಿಸದೆ
ಬಿಸುವಾತಿನೊಳು ಬೇಯಿಸದಿದ್ದ ಮಾತ್ರವ
ನೊಸೆದೀವುದೊಳ್ವಾತಿನೊಳು ೩೫

ನೆರೆಮನೆ ಮುಮ್ಮನೆ ಗರತಿಯರೊಲಿದೊಮ್ಮೆ
ಬರೆ ತನ್ನ ಮನೆಯ ಬಾಗಿಲಿಗೆ
ಕರೆದಾದರಿಸಿ ಕೈಲಾಪ ತೆರದಿ ಸ
ತ್ಕರಿಸಿ ಭರದೆ ಕಳುಪುವುದು ೩೬

ಮೊನೆಗಾತಿ ಮುಗುದೆ ಮುಸುಂಡಿಯಾಗಲಿ ನೆರೆ
ವನೆ ಗರತಿಯ ನೀಕರಿಸದೆ
ಮನೆಗೆ ಬಂದೆಡೆಯೊಳು ಮನ್ನಿಸಿ ಮನಮೊಲಿ
ದನುವರಿತಾದರಿಸುವುದು ೩೭

ಒಳ್ಪುಗಳನ್ನೂ ಪತಿವ್ರತೆಯರು ವರ್ಣಿಸಬಾರದು. ೩೪. ಗುರು, ಹಿರಿಯ, ತಂದೆ, ಸೋದರ, ಮಗ, ರಕ್ಷಿಸುವ ರಾಜ - ಯಾರಾದರೇನು ? ತನಗೆ ಹನ್ನೆರಡು ವರುಷವಾದ ತರುವಾಯ ಅವರಲ್ಲಿ ಯಾರೊಡನೆಯೂ ಸೇರದೆ ದೂರವಿರ ಬೇಕು. ೩೫. ಹಸಿವಿನಿಂದ ಬಳಲಿ ಭಿಕ್ಷುಕನು (ಆಗುಂತುಕನು) ಬೇಡಿದಾಗ, ಅದು ವೇಳೆಯಲ್ಲ ಎಂದು ಕೂಗಾಡದೆ, ಕೋಪದ ನುಡಿಗಳಿಂದ ಅವನಿಗೆ ನೋವುಂಟುಮಾಡದೆ, ಇದ್ದುದನ್ನು ಒಳ್ಳೆಯ ಮಾತಿನಿಂದ ನೀಡಬೇಕು. ೩೬. ನೆರೆಮನೆಯ ಮುಂದಿನ ಮನೆಯ ಗೃಹಿಣಿಯರು ತನ್ನ ಮನೆಯ ಬಾಗಿಲಿಗೆ ಬಂದರೆ ಅವರನ್ನು ಬರ ಮಾಡಿಕೊಂಡು ಉಪಚರಿಸಿ ಕೈಲಾದಷ್ಟು ಸತ್ಕರಿಸಿ ಕಳಿಸಿಕೊಡುವುದು ಸರಿ. ೩೭. ನೆರೆ ಮನೆಯ ಗರತಿ ಜಗಳಗಂಟಿಯಾಗಲಿ, ಮುಗ್ಧೆಯಾಗಲಿ, ಮುಸುಂಡಿಯಾಗಲಿ ಏನೇ ಆಗಲಿ, ಅವಳು ಮನೆಗೆ ಬಂದಾಗ ಅವಳನ್ನು ತಾತ್ಸಾರದಿಂದ ಕಾಣದೆ, ಗೌರವ

---

೮. (ಕ, ಖ) ಬಾಯಿಡೆ.

ತನ್ನ ಮನೆಯ ಮದುವೆಯೊಳು ಮಂಗಲದೊಳು
ತನ್ನ ಬಾಂಧವರೆಲ್ಲರನು
ಅನ್ನ ಪಾನಂಗಳಿಂದಾದರಿಪುದು ಮತ್ತೆ
ಪೊನ್ನುಡೆಯಿತ್ತು ಪೂಜುವುದು ೩೮

ಅರಿಯದೂಳಿಗವೆಣ್ಗಳು ತಪ್ಪುಗೈದಡಿ
ಗೆರಗಿದೊಡನೆ ಮನಗರಗಿ
ಮರೆತದನೆಲ್ಲವ ಮಕ್ಕಳೊಲಿಸಗುವ
ಮರುಕವೆರಸಿ ಮನ್ನಿಪುದು ೩೯

ಮುಳಿದವರೊಳು ಮೊಗವಂಟ ಮುಗ್ಗದೆಯಾಡಿ
ಪಳಿವವರೊಳು ಪೋರುಗೊಳದೆ
ಮುಳುಗಿಯೆಚ್ಚವರೊಳು ಮೂದಲೆಯೆಸಗದೆ
ಒಳುವೆಂಡಿರೊಳ್ಪುವಡೆವುದು ೪೦

ಕಂಡ ಕಂಡವರೊಳು ಕಡುದೈನ್ಯವಡೆಯದು
ದ್ದಂಡೆಯೆನಿಸಿ ತಾನಿರದೆ
ಗಂಡನ ಘನತೆಯೆಂತಂತು ಪೆರ್ಮೆಯ ಕೈ
ಕೊಂಡೆಸೆವುದು ಕೋವಿದೆಯರು ೪೧

ದಿಂದಲೇ ಮನ್ನಿಸಿ ಅವರ ಮನವೊಲಿದಂತೆ ಆದರಿಸಿ ಕಳಿಸಿಕೊಡಬೇಕು. ೩೮. ತನ್ನ ಮನೆಯಲ್ಲಿ ನಡೆದ ಮದುವೆಯ ಮಂಗಲ ಸುಮುಹೂರ್ತದಲ್ಲಿ ಬಂದ ಬಂಧು ಬಾಂಧವರನ್ನು ಅನ್ನಪಾನಾದಿಗಳಿಂದ ಆದರಿಸಿ ಚಿನ್ನದ ಒಡವೆಗಳ ಉಡುಗೊರೆಗಳನ್ನು ಕೊಟ್ಟು ಗೌರವಿಸಬೇಕು. ೩೯. ತಿಳಿಯದ ದಡ್ಡ ಕೆಲಸಗಾರ್ತಿಯರು ಕೆಲಸ ಮಾಡು ವಾಗ ತಪ್ಪುಮಾಡಿ ಪಶ್ಚಾತ್ತಾಪಪಟ್ಟು ನಮಸ್ಕರಿಸಿದರೆ ಅವರ ತಪ್ಪನ್ನೂ ಮರೆತು, ಮಕ್ಕಳನ್ನು ಪ್ರೀತಿಸುವ ತೆರದಿಂದ, ಮರುಕದಿಂದ ಅವರನ್ನು ಕ್ಷಮಿಸಬೇಕು. ೪೦. ಕೋಪಿಸಿಕೊಂಡವರಲ್ಲಿ ಮತ್ತು ಮುಖ ಸಿಂಡರಿಸಿಕೊಂಡು ತಡವರಿಸದೆ ಮಾತ ನಾಡಿ ನಿಂದಿಸುವವರಲ್ಲಿ ಹೋರಾಟಕ್ಕೆ ನಿಲ್ಲದೆ, ನಮ್ರತೆಯಿಂದ ಇದ್ದು, ಮಾತೆಸೆದು ಜಗಳಕ್ಕೆ ಬರುವವರಲ್ಲಿ ಮೂದಲಿಸಿ ಮಾತನಾಡದೆ ಸಾಧ್ವಿಯರು ಒಪ್ಪವಾಗಿ ನಡೆದು ಕೊಳ್ಳಬೇಕು. ೪೧. ಬಲ್ಲ ಸಾಧ್ವಿಯರು ಕಂಡಕಂಡವರಲ್ಲಿ ದೈನ್ಯ ತೋರಿಸದೆ. ತಾನು ಗರ್ವಿಷ್ಠೆ, ಜಂಬಗಾತಿ ಎನ್ನುವುದನ್ನು ತೋರಿಸಿಕೊಳ್ಳದೆ ತನ್ನ ಪತಿಯ ಘನತೆಗೆ ತಕ್ಕಂತೆ

ಕೇಣಗೊಂಡವರೆಂತು ಕೆಣಕಿ ನೋಡಲಿ ಮತ್ತೆ
ಮಾಣಲಿ ಮಮತೆಯುಳ್ಳವರು
ಊಣೆಯವಿಲ್ಲದಂತೊಳ್ನಡತೆಯೊಳಿದ್ದು
ಕಾಣಿಸುವುದು ಘನತೆಯನು ೪೨

ಬಸವಿಯರೊಳು ಪಾತಕಿನಿಯರೊಳು ಮ
ತ್ತಸತಿಯರೊಳು ಕೆಳೆಗೊಳದೆ
ಪೊಸತಿಲ ಪೊರಗಡಿಯಿಡದೊಳ್ವೆಂಡಿರ
ಜಸವಳ್ಳಿ ಜಗವ ಪರ್ಬುವುದು ೪೩

ಮಾಲೆಗಾತಿಯ ಮಡಿವಳತಿಯ ಕಣಿತಿಯ
ಸೂಲಗಿತ್ತಿಯ ಸೂಳೆಯನು
ಆಲೋಚನೆಗಂತರಂಗಕೆ ಬರಿಸದೆ
ಮೇಲರಿತಿಹುದು ಮೇರೆಯೊಳು ೪೪

ಬಸಿರಿಯ ಬಾಣಂತಿಯ ಬೇನೆವಡೆದರೆ
ಹಸುಮಕ್ಕಳ ಹಯನುಗಳು
ಬಸವಳಿಸದೆ ಬಳಲಿಸದೆ ಬಯ್ಯದೆ ಬಗೆ
ಯೊಸೆದುಚಿತದೊಳೋವುವುದು ೪೫

ಹೆಮ್ಮೆಪಡುತ್ತಾ ನಡೆದುಕೊಳ್ಳಬೇಕು. ೪೨. ಅಸೂಯೆಗೊಂಡವರು ಎಷ್ಟೇ ಕೆದಕಿ ಪರೀಕ್ಷಿಸಲಿ, ಮಮತೆಯುಳ್ಳವು ಕೆದಕದೆ ಸುಮ್ಮನಿರಲಿ, ತಮ್ಮ ನಡತೆಯಲ್ಲಿ ಯೂವ ಲೋಪವೂ ಕಂಡುಬರದಂತೆ ಔನ್ನತ್ಯವನ್ನು ಗೃಹಸ್ತ್ರೀಯರು ಮೆರೆಯಬೇಕು. ೪೩. ಬಸವಿಯರೊಡನೆ, ಪಾತಕಿಯರೊಡನೆ, ಅಸತಿಯರೊಡನೆ ಸ್ನೇಹವನ್ನು ಬೆಳಸದೆ, ಹೊಸಿಲು ದಾಟದೆ ಇದ್ದರೆ ಪತಿವ್ರತೆಯರ ಕೀರ್ತಿಲತೆ ಲೋಕಕ್ಕೆಲ್ಲಾ ಹಬ್ಬುತ್ತದೆ. ೪೪. ಹೂವಾಡಿಗಿತ್ತಿ, ಅಗಸಗಿತ್ತಿ, ಕಣಿ ಹೇಳುವವಳು, ಸೂಲಗಿತ್ತಿ, ಸೂಳೆ ಇವರನ್ನು ಅಂತರಂಗಕ್ಕೆ ತಂದುಕೊಳ್ಳದೆ, ಇವರೊಡನೆ ಸಮಾಲೋಚನೆಯನ್ನು ಮಾಡದೆ ಅವರ ಸ್ವಭಾವವನ್ನು ಮಿತಿಯರಿತು ತಿಳಿದುಕೊಂಡಿದ್ದರೆ ಸಾಕು. ೪೫. ಬಸುರಿ, ಬಾಣಂತಿ, ರೋಗಿ, ಎಳೆಯ ಮಕ್ಕಳು, ದನಕರುಗಳು ಇವರನ್ನು ಶಕ್ತಿಗುಂದಿಸದೆ, ಆಯಾಸ ಪಡಿಸದೆ, ನಿಂದಿಸದೆ, ಮನಸ್ಸರಿತು ಯೋಗ್ಯರೀತಿಯಿಂದ

ನೀತಿ ವರ್ತನಗಳ ನಿಯಮಿಪ ಪಿರಿಯರ
ಮಾತುಗಳನು ಮನಗೊಳಿಸಿ
ಆ ತೆರದೊಳು ನಡೆದವನಿಯೊಳಧಿಕ ವಿ
ಖ್ಯಾತಿವಡೆವುದು ಕಾಂತೆಯರು ೪೬

ತಡೆಯದೆಳಮೆಯೊಳು ತಂದೆತಾಯಿಗಳಿಗೆ
ನಡುವರೆಯದೊಳು ನಲ್ಲನಿಗೆ
ಕಡುಮುದುಪಾದ ಕಾಲದೊಳು ತನ್ನಣುಗರಿ
ಗಡಕಮೆನಿಪುದಬಲೆಯರು ೪೭

ಈ ರೀತಿಯೊಳಿರ್ಪುದೇಕಪತ್ನಿಯರಿಗೆ
ನಾರಾಯಣನಾಜ್ಞೆಯೆಂದು
ಆರೈದು ತಿಳಿದಾಚರಿಪುದೊಡನೆ ಕೈ
ಸೇರುವುವಿಷ್ಟಸಿದ್ಧಿಗಳು ೪೮

ಅರಿತಾಚರಿಸಿಯಖಿಲ ಶಾಸ್ತ್ರತತ್ವವ
ನರಿಯದವರಿಗರಿಯಿಸುತ
ಮೆರೆವ ಸದ್ಗುರುಗಳ ಮೆಲ್ಲಡಿದಾವರೆ
ಗೆರಗಿ ಭಕ್ತಿಯನೆಸಗುವುದು ೪೯

ಸಲಹುವುದು ಸಾಧ್ವಿಯ ಕರ್ತವ್ಯ. ೪೬. ನೀತಿನಡತೆಗಳನ್ನು ನಿಯಮಿಸುವ ಹಿರಿಯರ ಮಾತುಗಳನ್ನು ಅರ್ಥಮಾಡಿಕೊಂಡು ಅದರಂತೆ ನಡೆದು ಲೋಕದಲ್ಲಿ ಪತಿವ್ರತೆಯರ ಕೀರ್ತಿಯನ್ನು ಪಡೆಯಬೇಕು. ೪೭. ಬಾಲ್ಯದಲ್ಲಿ ತಂದೆತಾಯಿಗಳಿಗೆ, ಪ್ರಾಯದಲ್ಲಿ ಗಂಡನಿಗೆ ಮುಪ್ಪಿನಲ್ಲಿ ತನ್ನ ಮಕ್ಕಳಿಗೆ ವಿಧೇಯರಾಗಿ ಅಬಲೆಯರು ನಡೆಯಬೇಕು. ೪೮. ಹೀಗೆ ನಡೆಯಬೇಕೆಂಬುದು ಪತಿವ್ರತೆಯರಿಗೆ ನಾರಾಯಣನ ಆಜ್ಞೆಯೆಂದು ಭಾವಿಸಿ ನಡೆದುಕೊಂಡರೆ ಇಷ್ಟಾರ್ಥಗಳು ಆಕೆಗೆ ಲಭಿಸುವುವು. ೪೯. ತಿಳಿವಳಿಕೆಯಿಂದ ನಡೆಯುತ್ತ, ಸಮಸ್ತ ಶಾಸ್ತ್ರದ ಅರ್ಥವನ್ನು ತಿಳಿಯದವರಿಗೆ ತಿಳಿಸುತ್ತ, ಗುರುಗಳಿಗೆ

ಕೀಳುದೇವತೆಗೆರಗದೆ ಕಿರಿಯರ ಮಾತ
ಕೇಳದೆ ಕೀಳಿಗಿಳಿಯದೆ
ಏಳುಲೋಕವ ಪೊಡೆಯೆಡೆಯೊಳಿಟ್ಟೋವುವ
ನಾಳುತನವನಾದರಿಪುದು ೫೦

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಉನ್ನತಿವಡೆದೊಗೆದುದು ನಾಲ್ಕನೆಯ ಸಂಧಿ
ಸನ್ನುತ ಗುಣಸಂಬಂಧಿ ೫೧

ನಮಸ್ಕರಿಸುತ್ತ ಭಕ್ತಿಯನ್ನು ತೋರಿಸಬೇಕು. ೫೦. ಕ್ಷುದ್ರದೇವತೆಗಳಿಗೆ ನಮಸ್ಕರಿಸದೆ ಕಿರಿಯರ ಮಾತನ್ನು ಕೇಳದೆ, ಕೀಳುತನಕ್ಕೆ ಇಳಿಯದೆ ಏಳುಲೋಕವನ್ನು ಹೊಟ್ಟೆಯೊಳಿಟ್ಟು ರಕ್ಷಿಸುವವನ ದೊರೆತನವನ್ನು ಗೌರವಿಸಬೇಕು. ೫೧. ಚೆನ್ನಿಗ ಚಿಕದೇವರಾಯನ ಸಂಚಿಯ ಹೊನ್ನಮ್ಮನು ರಚಿಸಿದ ಕಾವ್ಯದಲ್ಲಿ ಖ್ಯಾತಿಪಡೆದ ಗುಣದಿಂದ ಕೂಡಿದ ನಾಲ್ಕನೆಯ ಸಂಧಿ ಮನ್ನಣೆ ಪಡೆಯಿತು.

# ಐದನೆಯ ಸಂಧಿ

ಅಮರ್ದುಗಡೆವ ಸಮಯದೊಳಲ್ಲಿ ನೆರೆದಿ
ರ್ದಮರರಂತಚ್ಚರಿವಡೆಯೆ
ಕಮಲೆಗೆದೆಯನಿಂಬುಗೊಳಿಸಿದ ಪುರುಷೋ
ತ್ತಮನಡಿಗಾನೆರಗುವೆನು ೧

ಕಡೆವುದನುಳಿದು ಕಾದಿಹ ಬಿಡುಗಣ್ಣರ
ಗಡಣಂಗಳ ಕಡೆಗಣಿಸಿ
ಒಡನೆ ನಾರಾಯಣನುರವ ಸೇರಿದ ಸಿರಿ
ಮಡದಿಯಡಿಗೆ ವಂದಿಪೆನು ೨

ತಂದೆ ತಾಯಿಗಳೊಡವುಟ್ಟಿದರತ್ತೆ ಮಾ
ವಂದಿರು ಸಕಲ ಬಾಂಧವರು
ಕುಂದದೆ ನಲ್ವೆಂಡಿರ ಕೂರ್ತುಪಚರಿ
ಪಂದವನನುವದಿಸುವೆನು ೩

ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ
ಪೆಣ್ಣ ಪೆತ್ತವರು ಪೆರ್ಚುವರು
ಪೆಣ್ಣ ಪೆತ್ತುದರಿಂದೆ ಪೆಸರೆನಿಸಿತು ಮಿಗೆ
ಬಣ್ಣವೇರಿತು ಪಾಲ್ಗಡಲು ೪

೧. ಅಮೃತಮಂಥನದ ಕಾಲದಲ್ಲಿ, ಅಲ್ಲಿ ಸೇರಿದ್ದ ಅಮರರು ಆಶ್ಚರ್ಯಪಡುವಂತೆ ಲಕ್ಷ್ಮಿಗೆ ತನ್ನ ಹೃದಯದಲ್ಲಿ ಸ್ಥಾನವನ್ನು ಕೊಟ್ಟ ಪುರುಷೋತ್ತಮನ ಪಾದಕಮಲಗಳಿಗೆ ನಮಸ್ಕರಿಸುತ್ತೇನೆ. ೨. ಕ್ಷೀರಸಮುದ್ರವನ್ನು ಕಡೆಯುತ್ತಿದ್ದುದನ್ನು ನಿಲ್ಲಿಸಿ, ಬೆರಗುಗಣ್ಣುಗಳಿಂದ ಕೂಡಿದ ದೇವದಾನವರನ್ನು ಅಲಕ್ಷಿಸಿ ನಾರಾಯಣನ ವಕ್ಷಸ್ಥಳವನ್ನು ಸೇರಿದ ಲಕ್ಷ್ಮೀದೇವಿಗೆ ವಂದಿಸುತ್ತೇನೆ. ೩. ತಂದೆತಾಯಿಗಳನ್ನು ಒಡಹುಟ್ಟಿದವರನ್ನು ಅತ್ತೆಮಾವಂದಿರನ್ನು ಸಕಲ ಬಂಧುಗಳನ್ನು ಊನವಿಲ್ಲದೆ ಪ್ರೀತಿಯಿಂದ ಸಾಧ್ವಿಯರು ಉಪಚರಿಸುವ ಕ್ರಮವನ್ನು ಅನುವಾದಿಸುತ್ತೇನೆ. ೪. ಹೆಣ್ಣು ಹೆತ್ತವರ ಬಳಗ ಬೇಗ ಬೇಗ ಬೆಳೆಯುತ್ತದೆ. ಹೆಣ್ಣು ಹೆತ್ತವರು ಹೆಚ್ಚುತ್ತಾರೆ. ಹೆಣ್ಣು ಹೆತ್ತದ್ದರಿಂದ ಹೆಸರು ಬರುತ್ತದೆ. ಅದರಿಂದಲೇ ಕ್ಷೀರಸಮುದ್ರದ ಕೀರ್ತಿ ಹೆಚ್ಚಿತು.

ಪೆಣ್ಣಿಂಧ ಪೆರ್ಮೆಗೊಂಡನು ಹಿಮವಂತನು
ಪೆಣ್ಣಿಂದ ಭೃಗು ಪೆರ್ಚಿದನು
ಪೆಣ್ಣಿಂದ ಜನಕರಾಯನು ಜಸವಡೆದನು
ಪೆಣ್ಣ ನಿಂದಿಸಲೇಕೆ ಪೆರರು ೫

ಸಿರಿರಾಣಿಯ ಸೀತೆಯ ರುಕ್ಮಿಣಿಯ ಶ್ರೀ
ಹರಿಯೊಡನೊಂದೆ ಹಂತಿಯೊಳು
ಇರಿಸಿ ಪೂಜೆಯನೊಡರಿಸುವರು ಪಿರಿಯರು
ಪರಿಕಿಪೊಡವರು ಪೆಣ್ಣೈಸೆ ೬

ಪೆಣ್ಣಲ್ಲವೆ ನಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು ೭

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರಿರ್ವರೊಳೇಳ್ಗೆವಡೆದವರಿಂದ
ಸವನಿಪುದಿಹಪರಸೌಖ್ಯ ೮

೫. ಹಿಮವಂತ ಹೆಣ್ಣಿನಿಂದ ಹೆಮ್ಮೆಪಡೆದನು. ಹೆಣ್ಣಿನಿಂದ ಭೃಗುವಿಗೆ[೧] ಕೀರ್ತಿ. ಹೆಣ್ಣಿನಿಂದ ಜನಕನಿಗೆ ಖ್ಯಾತಿ, ಆದ್ದರಿಂದ ಇತರರು ಹೆಣ್ಣನ್ನು ಏಕೆ ನಿಂದಿಸಬೇಕು? ೬. ಲಕ್ಷ್ಮಿ, ಸೀತೆ, ರುಕ್ಮಿಣಿ ಇವರನ್ನು ಶ್ರೀಮನ್ನಾರಾಯಣನೊಡನೆ ಒಂದೇ ಪಂಕ್ತಿಯಲ್ಲಿ ಕೂಡಿಸಿ ಪೂಜಿಸುತ್ತಾರೆ, ಹಿರಿಯರು. ಅವರೆಲ್ಲ ಹೆಣ್ಣೇ ಅಲ್ಲವೆ ? ೭. ನಮ್ಮನ್ನೆಲ್ಲ ಹಡೆದ ತಾಯಿ ಹೆಣ್ಣಲ್ಲವೆ ? ನಮ್ಮನ್ನು ಸಾಕಿದವಳು ಹೆಣ್ಣಲ್ಲವೆ ? ಕಣ್ಣು ಕಾಣದ ಮೂರ್ಖರು ಹೆಣ್ಣು ಹೆಣ್ಣು ಎಂದು ಹೀನವಾಗಿ ಏಕೆ ಕಾಣುವರೋ ತಿಳಿಯದು. ೮. ಕುಮಾರನಾದರೆ ಹೆಚ್ಚಿನ ಗುಣವೇನು ? ಕುಮಾರಿಯಾದರೆ ಹೆಚ್ಚಿನ ಕುಂದೇನು ? ಇವರಿಬ್ಬರಲ್ಲಿ ಯಾರಿಂದ ಅಭಿವೃದ್ಧಿ ಹೊಂದುತ್ತಾರೆಯೋ ಅವರಿಂದ ಇಹಪರಸುಖಗಳು ಲಭಿಸುತ್ತವೆ.

---

೧. ಭೃಗುವಿನ ಮಗಳು ಲಕ್ಷ್ಮಿ.

ಕುಲಪುತ್ರನೋದಿ ತಿಳಿದು ನಡೆದಲ್ಲದೆ
ಕುಲವನುದ್ಧರಿಸಲರಿಯನು
ಕುಲಪುತ್ರಿಯೊಳ್ಳುವರನಿಗಿತ್ತ ಮಾತ್ರಕೆ
ಕುಲಕೋಟಿಯನುದ್ಧರಿಪಳು ೯

ಬಸುರೊಳ್ೊಗೆದು ಬಳೆದೇಕ ರೀತಿಯೊಳೆಲ್ಲ
ಸಿಸುಗಳಿರ್ದೊಡಮೇನು ಬಳಿಕ
ಒಸೆದಿತ್ತುದನೊಡಬಡುವಳು ಪೆಣ್ ಗಂಡು
ಪಸುಗೆಗೊಂಬನು ಬಲ್ಮೆಯೊಳು ೧೦

ಪುಟ್ಟದ ಮನೆಯೊಳು ಪೋರಿ ಪುರುಳುಗೊಂಬ
ದಿಟ್ಟ ಗಂಡುಗಳಂತಿರಲಿ
ಕೊಟ್ಟುದರಿಂದ ತಣಿವ ಕುವರಿಗೆ ಮನ
ಮುಟ್ಟಿ ಕೊಡುವುದು ಕೋವಿದರು ೧೧

ಎನ್ನ ಪೆತ್ತವರಿವರೀ ಮನೆಯೊಡವೆಗ
ಳೆನ್ನವೆಂದೆರವಿಲ್ಲದಿರ್ಪ
ಕನ್ನೆಯನನ್ಯರಿಗೀವನ್ನೆವರಮುರೆ
ಮನ್ನಿಸುವುದು ಮಮತೆಯೊಳು ೧೨

೯. ಕುಲಪುತ್ರನು ವಿದ್ಯಾಭ್ಯಾಸಮಾಡಿ, ಅದನ್ನು ಅರ್ಥಮಾಡಿಕೊಂಡು ನಡೆದು ಕೊಂಡ ಹೊರತು ಕುಲವನ್ನು ಉದ್ಧರಿಸಲಾರನು. ಕುಲಪುತ್ರಿಯನ್ನು ಒಳ್ಳೆಯ ಗಂಡನಿಗೆ ಕೊಟ್ಟು ಮದುವೆ ಮಾಡಿದ ಮಾತ್ರಕ್ಕೆ ಅವಳು ಕುಲಕೋಟಿಗಳನ್ನು ಉದ್ಧರಿಸುವಳು. ೧೦. ಒಂದೇ ಬಸುರಿನಿಂದ ಬಂದು, ಬೆಳೆದು ಒಂದೇ ರೀತಿಯಲ್ಲಿ ಎಲ್ಲ ಮಕ್ಕಳು ಇದ್ದರೂ ಅನಂತರ ಹೆಣ್ಣು ತನಗೆ ಪ್ರೀತಿಯಿಂದ ಕೊಟ್ಟದ್ದನ್ನು ಸ್ವೀಕರಿಸಿ ಸಂತೋಷಪಡು ವಳು. ಗಂಡು ಪೌರುಷದಿಂದ ತನ್ನ ಪಾಲನ್ನು ಬಲವಂತದಿಂದ ತೆಗೆದುಕೊಳ್ಳುವನು. ೧೧. ಹುಟ್ಟಿದ ಮನೆಯೊಳಗೆ ಕಲಹಮಾಡಿ, ದ್ರವ್ಯವನ್ನು ಪಡೆಯುವ ಗಂಡುಮಕ್ಕಳು ಹಾಗಿರಲಿ. ತಮಗೆ ವಿಶ್ವಾಸದಿಂದ ಕೊಟ್ಟಷ್ಟರಿಂದ ತೃಪ್ತಿಹೊಂದುವ ಹೆಣ್ಣು ಮಕ್ಕಳಿಗೆ ನ್ಯಾಯವಾಗಿ ಮನತುಂಬಿ ಬಲ್ಲವರು ಕೊಡಬೇಕು. ೧೨. 'ನನ್ನ ಹೆತ್ತವರು ಇವರು. ಈ ಮನೆಯ ಒಡವೆ ಆಸ್ತಿಗಳು ನನ್ನವು' ಎಂದು ಹೆಣ್ಣುಮಕ್ಕಳು ಆಸೆಪಡು ವುದಿಲ್ಲ. ಅಂಥ ಹೆಣ್ಣುಮಕ್ಕಳನ್ನು ಇತರರಿಗೆ ಕೊಡುವವರೆಗಾದರೂ ಮಮತೆಯಿಂದ ಚೆನ್ನಾಗಿ ಕಾಣ

ಅರಿತು ನಿಟ್ಟಿಸೆ ಗಂಡುಮಕ್ಕಳಿಂದತಿಶಯ
ದೆರಕದೊಳಿಸೆವ ಪೆಣ್ಗಳನು
ಪೊರನೋಟದಿಂದ ನೋಡದೆ ಪೋಲೆನಿಸದೆ
ಮರುಕವೆರಸಿ ಮನ್ನಿಪುದು ೧೩

ಪದುಳಗೊಳಿಸಿ ಪಲಬಗೆ ಪಸದನಗಳ
ಪುದುಗಿಸಿ ಪೊಂದೊಡಿಗೆಗಳ
ಮದುವೆಗೆ ನೆರೆದ ಪೆಣ್ಮಕ್ಕಳ ನಿಟ್ಟಿಪ
ರೆದೆಗೊಳಿಪಂತೆಸಗುವುದು ೧೪

ಸುಗುಣನಾವನು ಸುಚರಿತ್ರನಾವನು ಕಣ್ಗೆ
ಸೊಗಸುವ ಸೊಬಗನಾರೆಂದು
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ
ಳೊಗೆದೊಳ್ಳುವರನಿಗೊಲಿದು ೧೫

ಅಲೆಗೆಯ್ಯದವಮತಿಯೆಸಗದ ವೈರವ
ಬಲಿಸದೆ ಬರಿದೆ ಪಳಿಯದ
ಕೊಲೆ ಬೈಗಳಿಂದ ಕೋಟಲೆಗೊಳಿಸದ ಸ
ತ್ಕುಲಕೀವುದು ಕುವರಿಯನು ೧೬

ಪಣದಾಸೆ ನಂಟುತನದ ಪತ್ತಿಗೆ ನೇಹ
ದೆಣಿಕೆಗಳಿಂದೆದೆಗರಗಿ
ಗುಣ ಜವ್ವನ ಕುಲ ರೂಪುಗುಂದಿದ ನಡೆ
ವೆಣಕೀಯಲಾಗದು ಪೆಣ್ಣ ೧೭

ಬೇಕು. ೧೩. ವಿಚಾರಮಾಡಿ ನೋಡಿದರೆ ಗಂಡುಮಕ್ಕಳಿಗಿಂತ ಹೆಚ್ಚಾದ ಪ್ರೀತಿಯಿಂದ ಕಂಗೊಳಿಸುವ ಹೆಣ್ಣುಮಕ್ಕಳನ್ನು ಹೊರಗಿನವರು ಎಂಬ ದೃಷ್ಟಿಯಿಂದ ನೋಡದೆ, ಅವಳು ಹೊರೆ ಎಂದು ಭಾವಿಸದೆ ಮರುಕದಿಂದ ಕಾಣಬೇಕು. ೧೪. ಸುಖದಿಂದಿರು ವಂತೆ ನೋಡಿಕೊಂಡು, ಪಾತ್ರೆಪಡಗಗಳನ್ನು ಒದಗಿಸಿಕೊಟ್ಟು ಚಿನ್ನದ ಒಡವೆಗಳನ್ನು ಮದುವೆಗೆ ಸಿದ್ಧಳಾದ ಹೆಣ್ಣುಮಕ್ಕಳಿಗೆ ನೋಡುವ ಜನರ ಕಣ್ಣಿಗೆ ಕಟ್ಟುವಂತೆ ಕೊಟ್ಟು ಉಪಚರಿಸಬೇಕು. ೧೫. ಸುಗುಣನೂ ಒಳ್ಳೆಯ ನಡತೆಯುಳ್ಳವನೂ ರೂಪವಂತನೂ ಒಳ್ಳೆಯ ವಂಶದಲ್ಲಿ ಹುಟ್ಟಿದವನೂ ಆದ ಕುಮಾರನನ್ನು ಹುಡುಕಿ ಯೋಚನೆಮಾಡಿ ಹೆಣ್ಣನ್ನು ಕೊಡಬೇಕು. ೧೬. ತಿರುಗಾಟವಿಲ್ಲದವನು ಕೆಟ್ಟ ಬುದ್ಧಿಯನ್ನು ಬಳಸದ, ವೈರವನ್ನು ಸಾಧಿಸದ, ಸುಮ್ಮಸುಮ್ಮನೆ ಬಯ್ಯದ, ಹಿಂಸೆ, ಬೈಗುಳಗಳಿಂದ ತೊಂದರೆ ಕೊಡದ ಸತ್ಕುಲದಲ್ಲಿ ಹುಟ್ಟಿದ ಗಂಡಿಗೆ ಮಗಳನ್ನು ನೀಡಬೇಕು. ೧೭. ಹಣದಾಸೆಗಾಗಿ, ನಂಟಸ್ತಿಕೆಯ ಬಲವಂತಕ್ಕಾಗಿ ಸ್ನೇಹದ ಭಾರಕ್ಕಾಗಿ ಗಂಟುಬಿದ್ದು ಗುಣ, ಯೌವನ,

ಜಡನಿಗೆ ಜಾತಿಹೀನನಿಗೆ ಚಂಚಲನಿಗೆ
ಕಡುಮೂರ್ಖನಿಗೆ ಗಾಂಪನಿಗೆ
ಬಡತನದೊಳು ಬಲು ಬವಣೆಗೊಂಬವನಿಗೆ
ಕೊಡಲಾಗದು ಕುವರಿಯನು ೧೮

ಬಾಳಿ ಬದುಕಿ ತಣಿವಿಲ್ಲದ ತಮ್ಮಂತೆ
ಬಾಳಲೆಳಸುವ ಬಾಲಕಿಯ
ಬೀಳುಗುವರನಿಗೆ ಬೆಲೆಗೈದರೆಂಬುದ
ಕೇಳಿ ಕಿವಿಯ ಮುಚ್ಚುವುದು ೧೯

ತನ್ನ ಮನೆಯೊಳುಂಡು ತವರುಮನೆಯ ಸಂ
ಪನ್ನವಕ್ಕೆಂಬ ಪೆಣ್ಗಳಿಗೆ
ಪೊನ್ನ ತೊಡಿಗೆ ಪೊಸದುಗುಲಂಗಳನಿತ್ತು
ಮನ್ನಿಸುವುದು ಮನವರಿತು ೨೦

ಬಡವರಾವೆಮಗೆಲ್ಲಿ ಬರ್ಪುದೊಡವೆಯೆಂದು
ಕಡುದೈನ್ಯವಾಡಿ ಕಳೆಯದೆ
ಉಡದೆ ತೊಡದೆ ತಾವುಳಿದು ತನುಜೆಯರಿ
ಗುಡುತೊಡುವೊಡವೆ ಕೊಡುವುದು ೨೧

ತನ್ನ ತವರುಮನೆಯವರಿತ್ತ ಪಿತ್ತಳೆ
ಪೊನ್ನೆಂದು ಬಗೆದು ಪೂಜಿಸುವ
ಕನ್ನೆಯರೊಳು ಕಡುಗೂರ್ಮೆಯನೊಡರಿಸಿ
ಪೊನ್ನು ರನ್ನದೊಳು ಪೂಜುವುದು ೨೨

ಕುಲ, ರೂಪುಗಳಿಲ್ಲದ ನಡೆಯುವ ಹೆಣಕ್ಕೆ ಹೆಣ್ಣು ಕೊಡಬಾರದು. ೧೮. ಸೋಮಾರಿಗೆ, ಕುಲಹೀನನಿಗೆ, ಚಂಚಲಪ್ರವೃತ್ತಿಯುಳ್ಳವನಿಗೆ, ಹಠಮಾರಿಗೆ, ಬುದ್ಧಿಹೀನನಿಗೆ ಚಂಚಲ ಪ್ರವೃತ್ತಿಯುಳ್ಳವಗೆ, ಹಠಮಾರಿಗೆ, ಬುದ್ಧಿಹೀನನಿಗೆ, ಬಡತನದಲ್ಲಿ ನರಳುವವನಿಗೆ ಮಗಳನ್ನು ಕೊಡಬಾರದು. ೧೯. ಬಾಳಿ ಬದುಕಿ ತೃಪ್ತಿಯಿಲ್ಲದೆ ಇರುವ ತಮ್ಮಂತೆ ಬದುಕಲು ಇಚ್ಛಿಸುವ ಕನ್ಯೆಯನ್ನು ಅಯೋಗ್ಯನಿಗೆ ಮಾರಿದರು ಎಂಬ ಮಾತನ್ನು ಕೇಳಿ ಕಿವಿಯನ್ನು ಮುಚ್ಚಿಕೊಳ್ಳಬೇಕು. ೨೦. ತನ್ನ ಮನೆಯಲ್ಲಿ ಊಟಮಾಡಿ, ತವರುಮನೆಯ ಸಂಪತ್ತು ಅಭಿವೃದ್ಧಿಯಾಗಲಿ ಎಂದು ಬಯಸುವ ಹೆಣ್ಣುಗಳಿಗೆ ಚಿನ್ನದ ಆಭರಣಗಳನ್ನೂ ಹೊಸ ವಸ್ತ್ರಗಳನ್ನೂ ಕೊಟ್ಟು ಮನತುಂಬಿ ಗೌರವಿಸಬೇಕು. ೨೧. 'ನಾವು ಬಡವರು, ನಮಗೆಲ್ಲಿಂದ ಬರುತ್ತದೆ ಒಡವೆ' ಎಂದು ದೈನ್ಯವನ್ನು ತೋರಿಸದೆ ತಮ್ಮ ವಸ್ತ್ರಾಲಂಕಾರ ಗಳನ್ನು ಕಡಮೆ ಮಾಡಿಕೊಂಡು ಮಕ್ಕಳಿಗೆ ಒಡವೆ ವಸ್ತ್ರಗಳನ್ನು ಕೊಡಬೇಕು. ೨೨. ತನ್ನ ತವರುಮನೆಯರು ಕೊಟ್ಟ ಹಿತ್ತಾಳೆಯೇ ಚಿನ್ನ ಎಂದು ಭಾವಿಸಿ ಗೌರವಿಸುವ ಹೆಣ್ಣುಮಕ್ಕಳಲ್ಲಿ ಹೆಚ್ಚಿನ ವಾತ್ಸಲ್ಯವನ್ನು ತೋರಿಸಿ ಅವರನ್ನು ಚಿನ್ನರನ್ನಗಳಿಂದ

ಪುಟ್ಟಿದಂದದಿ ಬಂದು ಪೊಕ್ಕಳೆಂದಣುಗಿಯ
ನೆಟ್ಟನೆ ನಿಂದಿಸದಂತೆ
ಕಿಟ್ಟದ ಪಲಕೆಲವೊಡವೆಗಳನು ಕೈ
ಬಿಟ್ಟು ಕೊಡುವುದು ಬೇಸರದೆ ೨೩

ಬೇಡಿ ಬೇಡಿದ ವಸ್ತುವ ಪೆಣ್ಮಗುವಿಗೆ
ನೀಡುವ ನೇಮಗಾರರಿಗೆ
ಷೋಡಶದಾನದ ಫಲ ಸುಲಭದೊಳು ಕೈ
ಗೂಡುವುದೆಂಬರುತ್ತಮರು ೨೪

ಅನ್ನಪಾನದೊಳಾಭರಣ ವಸನದೊಳು
ಮನ್ನಣೆಯೊಳು ಮನವೊಲಿದು
ಕನ್ನೆರನ್ನೆಯರು ಪರಕೆಗೈಯಲಾ ಮನೆ
ಯುನ್ನತಿವಡೆದೊಪ್ಪುವುದು ೨೫

ಆದರಿಂದ ಪೆಣ್ಮಕ್ಕಳನಾದರಿಪುದು
ಮುದವೇರಿಪುದು ಮುದ್ದಿಪುದು
ಮದುವೆ ಮಂಗಲದೊಳು ಮನವೊಲಿದವರಿಗೆಂ
ದೊದವಿಪುದುಚಿತ ವಸ್ತುವಸು ೨೬

ಗೌರವಿಸುವುದು ಧರ್ಮ. ೨೩. 'ತಾನು ಹುಟ್ಟಿದಂತೆಯೇ ಬರಿಗೈಯಿಂದ ಬಂದು ಸೇರಿಕೊಂಡಳು' ಎಂದು ಮಗಳನ್ನು (ಗಂಡನ ಮನೆಯವರು) ದೂರದಂತೆ, ಹೊಸದಾದ ಹಲಕೆಲವು ಒಡವೆಗಳನ್ನು ಧಾರಾಳವಾಗಿ ಬೇಸರಿಸದೆ ಅವಳಿಗೆ ಕೊಡಬೇಕು. ೨೪. ಹೆಣ್ಣು ಮಗಳು ಕೇಳಿ ಕೇಳಿದ ವಸ್ತುಗಳನ್ನು ಕೊಡುವ ನಿಷ್ಠಾವಂತರಿಗೆ ಹದಿನಾರು ದಾನಗಳ ಪುಣ್ಯಫಲ ಸುಲಭದಲ್ಲಿ ಕೈಸೇರುತ್ತದೆ ಎನ್ನುತ್ತಾರೆ ಶ್ರೇಷ್ಠರು. ೨೫. ಅನ್ನಪಾನಗಳಿಂದ ಆಭರಣ ವಸ್ತ್ರಗಳಿಂದ, ಗೌರವದಿಂದ ಮನಃಪೂರ್ತಿಯಾಗಿ ಕನ್ಯಾಮಣಿಗಳು ಹರಸಿದರೆ ಆ ಮನೆ ಅಭಿವೃದ್ಧಿಯಾಗುತ್ತದೆ. ೨೬. ಆದ್ದರಿಂದ ಹೆಣ್ಣುಮಕ್ಕಳನ್ನು ಆದರಿಸಬೇಕು, ಸಂತೋಷಪಡಿಸಬೇಕು, ಪ್ರೀತಿಸಬೇಕು, ಮದುವೆ ಮಂಗಳಮುಹೂರ್ತಗಳಲ್ಲಿ ಮನವಾರೆ ಅವರಿಗೆ ಯೋಗ್ಯವಾದ ಉಡುಗೊರೆಗಳನ್ನು ನೀಡಬೇಕು.

ಸಣ್ಣ ಬಣ್ಣದ ಸೀರೆಯ ಪೂಸರವ ಇಂ
ಬಣ್ಣ ಪಲವು ಭಕ್ಷ್ಯಗಳ
ಕಣ್ಣುವಿಡಿದುದನು ಕಳುಹಿಸುವುದು ತನ್ನ
ಪೆಣ್ಣಿದ್ದ ಮನೆಗೆ ಬೇಸರದೆ ೨೭

ಅಂದಂದಿಗೆ ನೆನೆನೆನೆದು ನೇಹದೊಳೆನ್ನ
ಕಂದನೆಂತಿರ್ದಪಳೆಂದು
ಬಂದ ಬಂದವರ ಬಣ್ಣಿಸಿ ಕೇಳುವುದು ಮನ
ದಂದು ಮಾನಿಸರನಟ್ಟುವುದು ೨೮

ಬರಿಸುವುದೊಂದೂರೊಳಿರ್ಪಳನುಪಚಾರ
ವೆರಸಿ ಪಾರಣೆ ಪರ್ವಗಳಿಗೆ
ನೆರೆಯೂರೊಳು ಬಾಳುವ ನಿಜತನುಜೆಯ
ಕರೆಯಿಸುವುದು ಕಾಲವರಿತು ೨೯

ತಂದೆಯ ಮನೆಯಿಂದ ತಂದೆನೀ ವಸ್ತುವ
ನೆಂದೇಳ್ಗೆಯ*ಕೊಳುವಂತೆ
ಬಂದ ಬಂದಾಗ ಬರಿದೆ ಕಳುಪದೆ ಪೆಣ್ಣಿ
ಗೊಂದರೆಯೊಡವೆಗೊಡುವುದು ೩೦

೨೭. ಸಣ್ಣದೂ ಬಣ್ಣವುಳ್ಳದ್ದೂ ಆದ (ಅಥವಾ ಮಿರುಗುವ ಬಣ್ಣವಿಲ್ಲದ) ಸೀರೆಯನ್ನೂ ಹೂವಿನ ಸರವನ್ನೂ ರುಚಿಕರವಾದ ತಿಂಡಿಗಳನ್ನೂ, ಕಣ್ಣಿಗೆ ಆನಂದವುಂಟು ಮಾಡುವ ವಸ್ತುಗಳನ್ನೂ ಮಗಳ ಮನೆಗೆ ಕಳಿಸಿಕೊಡಬೇಕು. ೨೮. ಆಗಾಗ ಅವರನ್ನು ನೆನೆಯಬೇಕು, ನನ್ನ ಮಗಳು ಹೇಗಿದ್ದಾಳೆ ಎಂದು ಅವಳ ಕ್ಷೇಮವನ್ನು ವಿಚಾರಿಸಿ ಕೊಳ್ಳಬೇಕು. ಮನಸ್ಸು ಮಾಡಿ ಬೇಕಾದವರನ್ನು ಅವರ ಬಳಿಗೆ ಕಳಿಸಿಕೊಡುವುದೂ ಅವಶ್ಯಕ. ೨೯. ಒಂದೇ ಊರಿನಲ್ಲಿರುವ ಮಗಳನ್ನು ಹಬ್ಬ, ಪಾರಣೆಗಳಿಗೆ ಉಪಚಾರ ಮಾಡಿ ಕರೆಸಿಕೊಳ್ಳಬೇಕು. ಬೇರೆ ಊರಿನಲ್ಲಿರುವ ಮಗಳನ್ನು ಸಮಯ ನೋಡಿ ಕರೆಸಿಕೊಳ್ಳುವುದು ಯೋಗ್ಯ. ೩೦. ತಂದೆ ಮನೆಯವರು ಕೊಟ್ಟ ವಸ್ತು ಇದು ಎಂದು ಹೆಣ್ಣು ಹೇಳಿಕೊಂಡು ಹೆಮ್ಮೆಪಡುವಂತೆ, ಅವಳು ಬಂದು ಬಂದಾಗ ಬರಿಯ ಕೈಲಿ ಕಳಿಸದೆ ಏನಾದರೂ ಒಂದು ಚೂರು ಒಡವೆ ಕೊಟ್ಟು ಕಳಿಸಬೇಕು.

ಮಂದಿವಾಳದೊಳಾಣ್ಮನ ಮೇಗಣ ದೂರ
ತಂದ ತನ್ನಣುಗಿಯನೊಡನೆ
ಹಿಂದುಮುಂದೆಣಿಸದೆ ಹೀಯಾಳಿಸಿ ಮಿಗೆ
ನಿಂದಿಸಿ ನೀಕರಿಸುವುದು ೩೧

ಅವಿವೇಕದೊಳು ತನ್ನಾಣ್ಮನ ನುಡಿಗೇಳ
ದವಮತಿಗಳನಾಚರಿಪ
ಕುವರಿಗೆ ಸಲಿಗೆ ಕೊಟ್ಟು ಕೊಬ್ಬಿಪ ತವ
ರವರ್ಹೆಸೆ ಪೆಣ್ಗಾಗದವರು ೩೨

ಮುಳಿವ ಮೋಡಿಯೊಳಿರ್ಪ ಮೊನೆವಾತಾಡುವ
ಪಳಿವ ಪಲವು ಪಾಡುಗಳಿಗೆ
ಅಳಲುವ ಮನವನಡಗಿಸಿಯಣುಗಿಗಾಗಿ
ಅಳಿಯನಿಗಳುಕಿ ನಡೆವುದು ೩೩

ಪೆತ್ತ ಪೆಣ್ಮಗಳ ಪೆರ್ಚಿಸಿ ಮೈಮರೆದು
ನ್ನತ್ತೆಪ್ಪಂತೆ ಮನ್ನಿಸದೆ
ಸುತ್ತು ಕೆಲಸವ ಕಲಿಸಿ ಗೈಸುವುದೊಡ
ನೊತ್ತಿ ನುಡಿವುದುಚಿತವನು ೩೪

೩೧. ಅತಿಸಲುಗೆಯಿಂದ ಗಂಡನ ಮೇಲೆ ದೂರುತಂದ ತನ್ನ ಮಗಳನ್ನು ಹಿಂದು ಮುಂದೆಣಿಸದೆ, ಆಕ್ಷೇಪಿಸಿ ಬಯ್ದು ಮನೆಗೆ ಸೇರಿಸದೆ ಧಿಕ್ಕರಿಸಬೇಕು. ೩೨. ಅವಿವೇಕದಿಂದ ತನ್ನ ಗಂಡನ ಮಾತುಗಳನ್ನು ಕೇಳದೆಕೆಟ್ಟಕೆಲಸ ಗಳನ್ನು ಆಚರಿಸುವ ಮಗಳಿಗೆ ಸಲಿಗೆಕೊಟ್ಟು ಕೊಬ್ಬಿಸುವ ತವರಿನವರು ನಿಜವಾಗಿ ಹೆಣ್ಣಿನ ದ್ವೇಷಿಗಳು. ೩೩. ಕೋಪಿಸುವ ಗರ್ವದಿಂದ ತಂಬಿದ, ಜಗಳವಾಡುವ, ನಿಂದಿಸುವ ಅಳಿಯನಾಗಿದ್ದರೂ ಹಲವಾರು ಕಷ್ಟಗಳಿಗೆ ದುಃಖಿಸುವ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಮಗಳಿಗಾಗಿ ಅಂಥ ಅಳಿಯನಿಗೆ ಹೆದರಿ ನಡೆಯಬೇಕು. ೩೪. ಹೆತ್ತ ಹೆಣ್ಣುಮಕ್ಕಳನ್ನು ಉಬ್ಬಿಸಿ ಮೈಮರೆತು ಉನ್ಮತ್ತೆಯರಾಗುವಂತೆ ಮಾಡದೆ ಮನೆಯ ಸುತ್ತಮುತ್ತ ಕೆಲಸವನ್ನು ಕಲಿಸಿಕೊಡಬೇಕು, ಔಚಿತ್ಯವೇನೆಂಬುದನ್ನು ಮತ್ತೆ ಮತ್ತೆ ಹೇಳಿಕೊಡಬೇಕು.

ಕಂದ ಕೇಳಿನಿಯನು ಕನಲಿ [1]ಕಾಡಿ[1]ದೊಡದ
ರಿಂದ ನೀನಳವಳಿಯದಿಹು
ಒಂದಡಿಯಿಂದೊದೆದೊಡಮದನುಳಿದು ಮ
ತ್ತೊಂದಡಿವಿಡಿದೊಡಬಡಿಸು ೩೫

ಇನಿಯನೊಲಿದು ನಿನ್ನಿಚ್ಛೆಯರಿತು ಮಿಗೆ
ಸನುಮಾನಗೈದು ಸಂತವಿಸೆ
ಎನಗೊಳಗಾದನೆಂದೆಣಿಸಿ ಮೈಮರೆಯದೆ
ಅನುನಯದಿಂದನುಸರಿಸು ೩೬

ಕುಲಕೆ ಪೊರಗು ಕೊಟ್ಟ ಪೆಣ್ಣೆಂಬುದನರಿ
ತೆಲಗೆ ನೀನೆಮ್ಮ ಬಯಸದೆ
ಅಲೆಗೈವ ನಲ್ಲನೊಳಡಕಮಾಗಿರ್ದೆಮ್ಮ
ಕುಲದೇಳ್ಗೆಯ ಕೊನರಿಡಿಸು ೩೭

ಮುಳಿಸು ಬೇಸರು ಮೋಡಿಯಲಸಿಕೆ ಮೊನೆ ಮನ
ದಳಲಂಜಿಕೆ [2]ದುಗುಡ[2]ದೊಳು
ತಿಳಿತಿಳಿದಿನಿಯನಿಂಗಿತ ಭೇದಂಗಳ
ನಳುಕಿಯಳುಕಿ ಅನುಸರಿಸು ೩೮

೩೫. "ಮಗು ಕೇಳು, ಪ್ರಿಯನು ಕೋಪದಿಂದ ಕಾಡಿದರೆ ನೀನು ಅದರಿಂದ ಬೇಸರ ಪಡಬೇಡ. ಅವನು ಒಂದು ಕಾಲಿನಿಂದ ಒದ್ದರೆ, ಅದನ್ನು ಬಿಟ್ಟು ಇನ್ನೊಂದು ಕಾಲನ್ನು ಹಿಡಿದು ಅವನನ್ನು ಸಮಾಧಾನಪಡಿಸು. ೩೬. ಗಂಡನು ನಿನ್ನನ್ನು ಪ್ರೇಮಿಸಿ ನನ್ನ ಅಪೇಕ್ಷೆಯನ್ನು ತಿಳಿದು ನಿನಗೆ ಸನ್ಮಾನಮಾಡಿ ಸಂತೋಷಪಡಿಸಿದರೆ, ಅವನು ನನ್ನ ವಶನಾಗಿದ್ದಾನೆ ಎಂದು ಮೈಮರೆಯದೆ ಅವನಲ್ಲಿ ಕ್ರಮವರಿತು ನಡೆಯುವುದನ್ನು ಕಲಿ. ೩೭. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬುದನ್ನು ತಿಳಿದುಕೊಂಡು ನೀನು ತವರನ್ನು ಬಯಸದೆ, ಹಿಂಸೆಮಾಡುವ ಗಂಡನಲ್ಲಿ ಹೊಂದಿಕೊಂಡಿದ್ದು ನಮ್ಮ ವಂಶದ ಏಳ್ಗೆಯನ್ನು ಚಿಗುರುವಂತೆ ಮಾಡು. ೩೮. ಕೋಪ, ಬೇಸರ, ಬಿಗುಮಾನ, ಆಲಸ್ಯ, ಹಿಂಸೆ, ಮನಸ್ಸಿನ ದುಃಖ, ಹೆದರಿಕೆ, ಚಿಂತೆಯಲ್ಲಿಯೂ ಇನಿಯನ ಅಭಿಪ್ರಾಯವನ್ನೂ ಭೇದಗಳನ್ನು ತಿಳಿದು ಅಂಜುತ್ತಂಜುತ್ತಾ ಅವುಗಳನ್ನು ನಡೆಸು.

---

೧. (ಗ) ಕಾದಿ ೨. (ಕ, ಗ) ಮರುಕ.

ಕನಸಿನೊಳಾದೊಡಮಿದಿರುವಾತಾಡದೆ
ಕನಲದೆ ಕಲಹವೆಸಗದೆ
ಮನೆಯೊಳಗಿರುವೆಮ್ಮ ಮಂದಿಗೆ ಬರಿಸೆ
ಮನದನ್ನನ ಮನವೊಲಿಸು ೩೯

ಅತ್ತೆ ಮಾವಂದಿರುಗಳುಕಿಯಕ್ಕರುಗೂಡಿ
ಚಿತ್ತವರಿತು ಸೇವೆಯೆಸಗು
ಅತ್ತಿಗೆ ನಾದಿನಿಯರನನುವರ್ತಿಸು
ಪೆತ್ತವರನು ಪೆರ್ಮೆಗೊಳಿಸು ೪೦

ಸವತಿಯರೊಳು ಸಂಗ್ಞಾತಿವೆಂಗಳವೊಲು
ನೆವಮಿಲ್ಲದ ನೇಹ 'ವೆರಸು'
ಅವರಿವರಂತಿಂತು ನುಡಿದ ಚಾಡಿಗಳಿಗೆ
ಕಿವಿಗಳನಿತ್ತು ಕೇಳದಿರು ೪೧

ಮಗಳೆ ನಿನ್ನಿನಿಯನ ಮನೆಯವರೆಮ್ಮೊಳು
ಪಗೆ ಸಾಧಿಸಿ ಬಯ್ದೊಡದಕೆ
ಬಗೆಯೊಳು ತಾಳುಮೆಯನು ಬಲಿದವರೊಳು
ಮೊಗವಂಟದೆ ಮೋನವೆಸಗು ೪೨

೩೯. ಕನಸಿನಲ್ಲಾದರೂ ಕೂಡ ಗಂಡನಿಗೆ ಎದುರು ಮಾತನಾಡದೆ, ಕೋಪಿಸದೆ, ಜಗಳವಾಡದೆ, ಮನೆಯಲ್ಲಿರುವ ತವರಿನ ನಂಟರನ್ನು ಕರೆಸಿಕೊಳ್ಳದೆ ಮನಃಪ್ರಿಯನ ಮನವನ್ನು ಒಲಿಸಿಕೊ. ೪೦. ಅತ್ತೆ ಮಾವಂದಿರಿಗೆ ಅಂಜಿ ಪ್ರೀತಿಯಿಂದ ಅವರ ಮನವರಿತು ಸೇವೆಮಾಡು. ಅತ್ತಿಗೆ ನಾದಿನಿಯ ರೊಡನೆ ಅನುಸರಿಸಿಕೊಂಡು ಹೋಗು, ಹೆತ್ತವರಿಗೆ ಹೆಮ್ಮೆಯನ್ನು ತಂದುಕೊಡು. ೪೧. ಸವತಿಯರಲ್ಲಿ ಸ್ನೇಹಿತೆಯರಾದ ಹೆಣ್ಣುಮಗಳ ರೀತಿಯಲ್ಲಿ ನಿರ್ವ್ಯಾಜವಾದ ಸ್ನೇಹವನ್ನು ಬೆಳೆಸು. ಅವರಿವರು ಹೇಳಿದ ಚಾಡಿಮಾತುಗಳನ್ನು ಕಿವಿಗೊಟ್ಟು ಕೇಳಬೇಡ. ೪೨. ಮಗಳೆ, ನಿನ್ನ ಗಂಡನ ಮನೆಯವರು ನಮ್ಮಲ್ಲಿ ಹಗೆ ಸಾಧಿಸಿ ಬಯ್ದರೆ, ನಿಂದಿಸಿದರೆ, ಅದನ್ನು ತಾಳ್ಮೆಯಿಂದ ಮನಸ್ಸಿನಲ್ಲಿ ಸಹಿಸಿಕೊಂಡು ಮುಖವನ್ನು ಸಿಂಡರಿಸಿಕೊಳ್ಳದೆ ಮೌನವನ್ನು ತಳೆ.

---

೩. (ಗ) ವೆಸಗು

ಪೇರೈಸಿರಿಯಿಂದ ಪಿಗ್ಗಿ ಬೆರೆತು ನಿನ್ನ
ಮೇರೆ ತಾರೆಯ ಮೀರದಿರು
ಸೇರಿಯೂಳಿಗವೆಸಗುವ ಸೇವಕರನು
ಸೈರಣೆಗೊಂಡು ಸಂತವಿಸು ೪೩

ಎಂತು ನಡೆದೊಡಿನಿಯನಿ[೪]ಗಿಂಪು[೪]ದೋರುವು
ದೆಂತು ನಡೆದೊಡೇಳ್ಗೆಯಹುದು
ಎಂತು ನಡೆದೊಡೆಲ್ಲರುಮಿದು ಲೇಸೆಂಬ
ರಂತಿರು ಸಂತೋಷದೊಳು ೪೪

ಇಂತು ಪೆಣ್ಮಕ್ಕಳಿಗೆದೆಯೊಳು ನೆಲೆಗೊಳು
ವಂತೆ ಬುದ್ಧಿಯನು ಪೇಳುವುದು
ಪಿಂತಣ ನಲ್ವೆಂಡಿರ ಪೆರ್ಮೆಗಳನೋ
ರಂತೆ ಬಣ್ಣಿಸಿ ಪೊಗಳುವುದು ೪೫

ಅಣ್ಣತಮ್ಮಂದಿರನಿಬರೊಡವುಟ್ಟಿದ
ಪೆಣ್ಣನು ಪೆರ್ಮೆಗೊಳಿಸಿ
ಬಣ್ಣಬಂಗಾರದ ಬಗೆ ಬಗೆಯಿಂದಿತ್ತು
ತಣ್ಣನೆ ತಣಿಸಿ ಬಾಳುವುದು ೪೬

೪೩. ಅಧಿಕ ಐಶ್ವರ್ಯದಿಂದ ಹಿಗ್ಗಬೇಡ. ಸಿರಿಯ ಬೆಂಬಲದಿಂದ ಮೇರೆಮೀರಿ ನಡೆಯಬೇಡ. ನಿಮ್ಮ ಮನೆಗೆ ಸೇರಿಕೊಂಡು ಕೆಲಸಮಾಡುವ ಊಳಿಗದವರನ್ನು ಸಹನೆಯಿಂದ ನೋಡಿಕೊ. ೪೪. ಗಂಡ ಹೇಗೆ ನಡೆದುಕೊಳ್ಳಲಿ ಅವನಿಗೆ ಪ್ರಿಯವಾದುದನ್ನೇ ಹೇಳು, ಮಾಡು. ಹೇಗೆ ನಡೆದುಕೊಂಡರೆ ಏಳ್ಗೆಯಾಗುತ್ತದೆ, ಹೇಗೆ ನಡೆದುಕೊಂಡರೆ ಎಲ್ಲರು 'ಸರಿ, ಒಳ್ಳೆಯದು' ಎನ್ನುತ್ತಾರೆ - ಹಾಗೆ ಸಂತೋಷದಿಂದಲೇ ವರ್ತಿಸುತ್ತಿರು". ೪೫. ಹೀಗೆ ಹೆಣ್ಣುಮಕ್ಕಳ ಮನಸ್ಸಿಗೆ ಹಿಡಿಯುವಂತೆ ತಿಳಿವಳಿಕೆ ಹೇಳಬೇಕು. ಹಿಂದೆ ಬಾಳಿದ ಸಾಧ್ವಿಯರು ನಡೆದುಕೊಂಡ ವಿಚಾರಗಳನ್ನು ವರ್ಣಿಸಿ ಹೊಗಳಬೇಕು. ೪೬. ಒಡಹುಟ್ಟಿದ ಅಣ್ಣ ತಮ್ಮಂದಿರು ಹೆಣ್ಣನ್ನು ಹೆಮ್ಮೆಪಡುವಂತೆ ನೋಡಿಕೊಂಡು ವಿವಿಧ ರೀತಿಯಲ್ಲಿ ಒಡವೆ ವಸ್ತ್ರಗಳನ್ನು ತಂದುಕೊಟ್ಟು ತೃಪ್ತಿಪಡಿಸಿ ಅವಳ ಬದುಕನ್ನು

---

೪. (ಗ) ಗಿಂಬು

ಸೋದರ ಮಾವಂದಿರು ಸೊಸೆಯರಿಗೆ ಬೇ
ಕಾವ ವಸ್ತುವ ಕೈಯೊಡನೆ
ಆದರದಿಂದಳವಡಿಪುದಲಸದೆ ಸಂ
ಪಾದಿಪುದಿಹಪರಗಳನು ೪೭

ತಂದೆಯೊಡನೆ ತಾಯೊಡನೆ ತನ್ನೊಡನೆಯು
ಮೊಂದು ಬಸುರೊ"ಳೊಗೆ"ದವರು
ಕುಂದದೆ ಬಾಳುವ ಕುವರಿಗೆ ಕುರುಪುಗೊಂ
ಡೊಂದರೆಯೊಡವೆಗೊಡುವುದು ೪೮

ಕುವರಿಯನಿಂತು ಕೂರ್ಮೆಯೊಳು ಸಲಹಿ ಮ
ತ್ತವಳನಿತ್ತೊಳ್ಳುವರನಿಗೆ
ಸವೆಯದ ಧರ್ಮವ ಸಂಪಾದಿಸಿ ಮಾ
ಧವನ ಮನವ ಬರಿಸುವುದು ೪೯

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಉನ್ನತಿವಡೆದೊಪ್ಪಿದುದೈದನೆಯ ಸಂಧಿ
ಸನ್ನುತ ಗುಣಸಂಬಂಧಿ ೫೦

ಚೆನ್ನಾಗಿ ಮಾಡಿ ತಾವು ಬಾಳಬೇಕು. ೪೭. ಸೋದರಮಾವಂದಿರು ತಮ್ಮ ಸೊಸೆಯರಿಗೆ (ತಂಗಿಯ ಮಕ್ಕಳಿಗೆ) ಅವರಿಗಿಷ್ಟವಾದ ವಸ್ತುಗಳನ್ನು ಕೊಟ್ಟು, ಆದರಿಸಿ, ಅಲಕ್ಷ್ಯ ಮಾಡದೆ ಅವರನ್ನು ನೋಡಿಕೊಳ್ಳಬೇಕು. ತಾವೂ ಇಹಪರಗಳನ್ನು ಈ ಮೂಲಕ ಸಾಧಿಸಬೇಕು. ೪೮. ಒಂದೇ ಹೊಟ್ಟೆಯಲ್ಲಿ ಹುಟ್ಟಿಬಂದ ಸೋದರರು ತಮ್ಮ ತಾಯಿತಂದೆಗಳಲ್ಲಿಯೂ ತಮ್ಮೊಡನೆಯೂ ಕುಂದದೆ ಬಾಳಿ ಬದುಕಿರುವ ಹೆಣ್ಣು ಮಗಳಿಗಾಗಿ (ಸೋದರಿಗಾಗಿ) ಕೆಲವು ಒಡವೆಗಳನ್ನು ಕೊಡಬೇಕು. ೪೯. ಮಗಳನ್ನು ಹೀಗೆ ಪ್ರೀತಿಯಿಂದ ಕಾಪಾಡಿ ಅವಳನ್ನು ಒಳ್ಳೆಯ ವರನಿಗೆ ಕೊಟ್ಟು ವಿವಾಹ ಮಾಡಬೇಕು. ಅದರಿಂದ ಎಂದೂ ವೆಚ್ಚವಾಗದ ಧರ್ಮವನ್ನು ಸಂಪಾದಿಸಬೇಕು. ಆ ಮೂಲಕ ಶ್ರೀಮನ್ನಾರಾಯಣನ ಮನಸ್ಸನ್ನು ತನ್ನ ಕಡೆಗೆ ಒಲಿಸಿಕೊಳ್ಳಬೇಕು. ೫೦. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ ರಚಿಸಿದ ಈ ಕಾವ್ಯದಲ್ಲಿ ಗುಣಪೂರ್ಣವಾದ ಖ್ಯಾತಿವೆತ್ತ ಐದನೆಯ ಸಂಧಿ ಮುಕ್ತಾಯವಾಯಿತು.

---

೫. (ಖ) ಳಾ

# ಆರನೆಯ ಸಂಧಿ

ಆವನಿಗಿಳೆಯುಮಾಗಸಮುಮಳತೆಗೊಳು
ವಾವೇಳೆಯೊಳಡಿಗಳಿಗೆ
ಪಾವುಗೆಯಂತಳವಟ್ಟು ತೋರಿದುವಾ
ದೇವನಿಗಾನು ವಂದಿಪೆನು ೧

ಕಡಲೆಡೆಯೊಳು ಮಲಗಿದನಾವಳಿಗಾಗಿ
ಕಡಲ ಕಡೆದು ಬಳಲಿದನು
ಕಡಲೊಳು ದಾರಿಗೈದನು ಶೌರಿಯಾ ಸಿರಿ
ಮಡದಿಯಡಿಗೆ ವಂದಿಪೆನು ೨

ಎಳೆಜವ್ವನಜೊಳೆಡೆಜವ್ವನದೊಳು ಮ
ತ್ತಿಳಿವ ಜವ್ವನದೊಳಿನಿಯಳ
ಒಳಗರಿತುಪಚರಿಸುವ ನಲ್ಲನಿಗವ
ಳೊಳಗಪ್ಪ ಬಗೆಯ ಬಣ್ಣಿಪೆನು ೩

ಎರವೆಳ್ಳನಿತಿಲ್ಲದೊರ್ವರೊರ್ವಳೊಡ
ವೆರೆದಿರ್ಪ ಸತಿಪತಿಗಳಿಗೆ
ದೊರೆಕೊಂಬುದು ಸಂಸಾರ ಸುಖದ ಸುಗ್ಗಿ
ಪರದೊಳಾನಂದ ಪರ್ಬುವುದು ೪

೧. ಯಾವನು ಆಕಾಶವನ್ನೂ ಭೂಮಿಯನ್ನೂ ಅಳತೆಮಾಡುವಾಗ ಅವುಗಳು ಅವನ ಪಾದರಕ್ಷೆಯಂತೆ ಕಂಡವೋ ಅಂಥ ಸ್ವಾಮಿಯಾದ ವಾಮನನಿಗೆ ನಮಸ್ಕರಿಸುತ್ತೇನೆ. ೨. ವಿಷ್ಣುವು (ಶ್ರೀರಾಮಾವತಾರದಲ್ಲಿ) ಯಾರಿಗಾಗಿ ಸಮುದ್ರದ ದಡದಲ್ಲಿ ಮಲಗಿದನೋ, ಯಾರಿಗಾಗಿ ಸಮುದ್ರಮಂಥನಮಾಡಿ ಆಯಾಸಗೊಂಡನೋ, (ಸೇತುವೆ ಕಟ್ಟಿ) ಸಮುದ್ರದಲ್ಲಿ ದಾರಿ ಮಾಡಿದನೋ, ಆ ಶೌರಿಯ ಪತ್ನಿ ಶ್ರೀದೇವಿಯ ಪಾದಗಳಿಗೆ ನಮಸ್ಕರಿಸುತ್ತೇನೆ. ೩. ಯೌವನದ ಆರಂಭದಲ್ಲಿ, ಯೌವನದ ಮಧ್ಯದಲ್ಲಿ ಮತ್ತು ಯೌವನವು ಇಳಿಯುವಾಗ ಪ್ರಿಯೆಯ ಅಂತರಂಗವನ್ನರಿತು ಉಪಚಾರ ಮಾಡುವ ನಲ್ಲನಿಗೂ ಅವಳಿಗೂ ಇರಬೇಕಾದ ಮನಃಸ್ಥಿತಿಯನ್ನು ವರ್ಣಿಸುತ್ತೇನೆ. ೪. ಸ್ವಲ್ಪವೂ ಭೇದವಿಲ್ಲದೆ ಒಬ್ಬರೊಡನೊಬ್ಬರು ಹೊಂದಿಕೊಂಡು ಇರುವ ಗಂಡ ಹೆಂಡಿರಿಗೆ ಸಂಸಾರದಲ್ಲಿ ಸುಖದ ಸುಗ್ಗಿ ಲಭಿಸುತ್ತದೆ. ಪರಲೋಕದಲ್ಲಿ ಆನಂದ

ಸತಿ ಪತಿಯರ ಸೌಹೃದದಿಂದ ಸಂಸಾರ
ವತಿಶಯವಡೆದು ತೋರುವುದು
ಇತರೇತರ ವೈರದಿಂದಿರ್ವರಿಗೆ ದು
ರ್ಗತಿಯಂತೆ ಕಂಗೊಳಿಸುವುದು ೫

ಒಳತೋಟಿಯೊಡರಿಪ ಗಂಡ ಪೆಂಡಿರ ಮನೆ
ನೆಳಲ ಸೇರರು ನೀತಿವಿದರು
ಬಳಿಕ ಮಾತೇನಿನ್ನು ಬಸುರೊಳು ಬಂದ ಮ
ಕ್ಕಳುಮಲ್ಲಗಳೆದು ನಡೆವರು ೬

ತೋಟಗೊಳುವ ದುಷ್ಟದಂಪತಿಗಳು ಬೂ
ತಾಟಗಳಿಂದನುಗೆಟ್ಟು
ಊಟ ನಿದ್ದೆಗಳೊಂದರೊಳು ಸುಖಮಿಲ್ಲದೆ
ಕೋಟಲೆಗೊಂಡು ಕುಗ್ಗುವರು ೭

ದಂಪತಿಗಳ ಪಗೆತನದಿಂದಿರ್ವರ
ಪೆಂಪಿನ ಬೇರು ಪರಿವುದು
ಸೊಂಪುಗೆಡುವುದು ಸೊಬಗು ಸಂಸಾರದ
ಜಂಪು ಸಡಿಲಿ ಜಾರುವುದು ೮

ದೊರಕುತ್ತದೆ. ೫. ಸತಿಪತಿಯರ ಸಹೃದಯತೆಯಿಂದ ಸಂಸಾರ ಅತ್ಯಂತ ಹೆಚ್ಚಿನ ಸುಖದ ಆಗರವಾಗಿ ಕಾಣುತ್ತದೆ. ಪರಸ್ಪರ ವೈರವಿದ್ದರೆ ಇಬ್ಬರೂ ದುರ್ಗತಿಯಲ್ಲಿದ್ದಾರೆ ಎಂದು ತೋರುತ್ತದೆ. ೬. ಅಂತಃಕಲಹವಿರುವ ಗಂಡಹೆಂಡಿರ ಮನೆಯ ನೆರಳನ್ನೂ ಕೂಡ ನೀತಿವಂತರು ಆಶ್ರಯಿಸುವುದಿಲ್ಲ. ಹೆಚ್ಚೇನು ? ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೂ ಅವರನ್ನು ಅಲ್ಲಗಳೆದು ಹೋಗುತ್ತಾರೆ. ೭. ಜಗಳಗಂಟಿಗಳಾದ ದುಷ್ಟ ದಂಪತಿಗಳು ತಮ್ಮ ವಕ್ರ ನಡತೆಗಳಿಂದ ಕ್ರಮ ತಪ್ಪಿ ಊಟ ನಿದ್ದೆಗಳಲ್ಲಿ ಸುಖವನ್ನು ಕಾಣದೆ ಅತಿಕಷ್ಟ ದಿಂದ ಕುಗ್ಗಿಹೋಗುತ್ತಾರೆ. ೮. ಗಂಡಹೆಂಡಿರಲ್ಲಿ ಹಗೆತನ ಮೂಡಿದರೆ ಮರ್ಯಾದೆಯ ಬೇರು ಕಿತ್ತುಹೋಗುತ್ತದೆ. ಸೊಬಗಿನ ಸೊಂಪು ಬಾಡಿಹೋಗುತ್ತದೆ. ಸಂಸಾರದ ಶಾಂತಿ ಹಾಳಾಗುತ್ತದೆ.

ಕಡುಮೂರ್ಖತನದೊಳು ಕಡೆಗಣಿಸುವ
ಬಿಡುನುಡಿಗಳ ಬಿತ್ತರಿಸುವ
ಬಿಡದೆ ಕಾದುವ ಗಂಡಪೆಂಡಿರನೇತಕೆ
ಪಡೆದನಕಟ ಪದ್ಮಭವನು ೯

ಒರ್ವರೊರ್ವರನೊಡಬಡಿಸದ
ಗರ್ವಿತ ದಂಪತಿಗಳನು
ಇರ್ವರನಿಳೆ ನುಂಗದೆ ಪೊರುವುದರಿಂದ
ಸರ್ವಂಸಹೆಯೆನಿಸುವುದು ೧೦

ತಿಳಿದದರಿಂದಿನಿಯರು ದಿಟ್ಟವೆಂಡಿರ
ಬಳಿಸಂದೊಡಬಡಿಸುವುದು
ತಿಳಿಪುದೆದೆಗೊಳಿಸುವುದಿಂಪುದೋರುವು
ದೊಳಗುಗ್ಗೈದೊಂದುವೆರೆವುದು ೧೧

ಒಲುಮೆಯನೊಳಕೊಂಡು ನಾಣ್ಚಿಯೊಲಿದಂತೆ
ಚಲಪೋರುವೆಳಜವ್ವನದ
ಕುಲಸತಿಯೊಳು ಕೋಪಿಸದೆ ಕೋಟಲೆಗೊಳ
ದಲಸದೆಯನುಸರಿಸುವುದು ೧೨

೯. ಅತ್ಯಂತ ಮೂರ್ಖರಾಗಿ, ಪರಸ್ಪರ ಅಲಕ್ಷ್ಯತೋರಿಸುವ ಬಿರುಸು ಮಾತುಗಳನ್ನಾಡುವ, ಒಂದೇ ಸಮನೆ ಜಗಳಕಾಯುವ ಗಂಡ ಹೆಂಡಿರನ್ನು ಆ ಬ್ರಹ್ಮ ಏತಕ್ಕಾಗಿ ಸೃಷ್ಟಿಮಾಡಿದನೋ ! ೧೦. ಒಬ್ಬರೊಬ್ಬರನ್ನು ಹೊಂದಿಸಿಕೊಳ್ಳಲಾರದ, ಒಬ್ಬರೊಬ್ಬರು ಹೊಂದಿಕೊಳ್ಳದ, ಜಂಬದ ಗಂಡ ಹೆಂಡಂದಿರನ್ನು ನುಂಗದೆ, ಅವರನ್ನು ಕಾಪಾಡುವುದರಿಂದ ಭೂಮಿತಾಯಿಗೆ 'ಸರ್ವಂಸಹೆ' (ಎಲ್ಲವನ್ನೂ ಸಹಿಸುವವಳು) ಎಂಬ ಹೆಸರು ಬಂದಿರಬೇಕು. ೧೧. ಈ ವಿಚಾರವನ್ನು ತಿಳಿದು ಗಂಡಂದಿರು ದಿಟ್ಟೆಯಾದ ಹೆಂಡತಿಯ ಬಳಿಗೆ ಅವಳನ್ನು ಒಪ್ಪಿಸಬೇಕು, ಅವಳಿಗೆ ತಿಳಿಯ ಹೇಳಬೇಕು, ಮನಸ್ಸಿಗೆ ಮುಟ್ಟುವಂತೆ ಮಾಡಬೇಕು ; ವಿಶ್ವಾಸ ತೋರಿಸಬೇಕು ; ವಶಪಡಿಸಿಕೊಳ್ಳಬೇಕು ; ಒಂದಾಗಿ ಬಾಳಬೇಕು. ೧೨. ಪ್ರೀತಿಯಿಂದ ತುಂಬಿದ್ದರೂ ನಾಚಿಕೆಯಿಂದ ಪ್ರೀತಿಯಿಲ್ಲದವಳಂತೆ ಹಟ ಹಿಡಿಯುವ ಹೊಸ ಯೌವನದ ಪತ್ನಿಯನ್ನು ಕೋಪಿಸಿ ದಟ್ಟಿಸದೆ, ಹಿಂಸೆಮಾಡದೆ, ಅಲಕ್ಷ್ಯತೋರದೆ ನಲ್ಲನಾದವನು ಅನುಸರಿಸಿ ನಡೆದುಕೊಳ್ಳಬೇಕು.

ಏನೆಂದರಿಯದೆಳವೆಯೊಳಿನಿಯಳಭಿ
ಮಾನಗೊಂಡಿರೆ ಮಚ್ಚರಿಸದೆ
ಮೋನದೊಳಿರದೆ ಮೋಡಿಯ ಕಾಣಿಸದೆ ಸ
ನ್ಮಾನದಿ ಮನಗರಗಿಪುದು ೧೩

ನಲ್ಲನಿಗೊಲಿದು ನಾಣ್ಚುವ ಮುದ್ದುವೆಣ್ಣಿನ
ಮೆಲ್ಲೆರ್ದೆ ಕಲ್ಲೆರ್ದೆಯೆನಿಸೆ
ಬಲ್ಲವನವಳ ಬಲುಮೆಗೈದು ಬಳಲದೆ
ಚಲ್ಲವಾಡುವುದು ಜಾಣ್ಮೆಯೊಳು ೧೪

ನಿಟ್ಟಿಸೆ ತಲೆವಾಗುವ ನೇಹದೊಳು ಮನ
ಮುಟ್ಟಿ ಮರಳಿ ನಿಟ್ಟಿಸುವ
ದಿಟ್ಟಿದಿಟ್ಟಿಗಳೊಡವೆರೆಯೆ ನಾಣ್ಚುವರೊಳ
ಗುಟ್ಟರಿತುಪಚರಿಸುವುದು ೧೫

ಮೀರಲೆಳಸಿ ಮೇಲುವರಿದು ಮನದ ಮಿತಿ
ಮೀರಲಂಜಿಕೆಗೊಂಬ ಮೆಯ್ಯ
ಏರುವ ಪುರ್ಬಿನೆರಗುವೊಳ್ಮೊಗದೆಳೆ
ನೀರೆಯ ನೆಲೆಯ ತಿಳಿವುದು ೧೬

೧೩. ಏನೂ ತಿಳಿಯದ ಯೌವನದ ಹೊಸ್ತಿಲಿನಲ್ಲಿರುವ ಪ್ರಿಯಳು ಅಭಿಮಾನದಿಂದ ಬೀಗುತ್ತಿದ್ದರೆ ಅದಕ್ಕೆ ಅಸೂಯೆಪಡದೆ, ಮೌನವನ್ನು ತಾಳದೆ, ಬಿಗುಮಾನವನ್ನು ತೋರಿಸದೆ, ಸನ್ಮಾನದಿಂದ ಅವಳ ಮನಸ್ಸು ಕರಗುವಂತೆ ವರ್ತಿಸಬೇಕು. ೧೪. ಪ್ರಿಯ ನನ್ನು ಪ್ರೀತಿಸಲು ನಾಚುವ ಪ್ರೀತಿಯ ಹೆಣ್ಣಿನ ಮೃದು ಹೃದಯ ಕಲ್ಲುಹೃದಯದಂತೆ ಕಂಡರೂ ತಿಳಿದ ಪ್ರಿಯನು ಅವಳನ್ನು ಬಲಾತ್ಕರಿಸಿ ಆಯಾಸಪಟ್ಟುಕೊಳ್ಳದೆ ಜಾಣತನದಿಂದ ಅವಳೊಡನೆ ಸರಸವಾಡಬೇಕು. ೧೫. ದೃಷ್ಟಿಯಿಟ್ಟು ನೋಡಿದರೆ ತಲೆ ತಗ್ಗಿಸುವ, ಅನಂತರ ಸ್ನೇಹದಿಂದ ಮನತುಂಬಿ ಹಿಂದಿರುಗಿ ನೋಡುವ, ಎರಡು ದೃಷ್ಟಿ ಗಳೂ ಸೇರಿದರೆ ನಾಚಿಕೊಳ್ಳುವ ಹೆಣ್ಣುಗಳ ಒಳಮರ್ಮವನ್ನು ತಿಳಿದು ನಡೆದುಕೊಳ್ಳ ಬೇಕು. ೧೬. ಮಿತಿಮೀರಿದ ಅಪೇಕ್ಷೆಯಿಂದ ಮೇಲೆ ಬೀಳುವ ಆತುರವಿದ್ದರೂ ಮನದ ಮಿತಿಯನ್ನು ಮೀರಲಾರದೆ ಹೆದರಿಕೊಳ್ಳುವ, ಮೈಮೇಲೆ ಬೀಳುವ, ಹುಬ್ಬಿನಿಂದಲೇ ಎರಗುವ ಸುಂದರಿಯಾದ ಎಳೆಯ ಹೆಣ್ಣಿನ ಅಂತರಂಗವನ್ನು ಅರಿತು ನಡೆಯಬೇಕು.

ಪೆರತೊಂದು ಪೆಂಪೇರುವೆರ್ದೆಯ ಮಿರುಪ ಮೆಯ್ಯ
ನಿರಿಗೊಂಬ ನಿಡುವುರ್ಬುಗಳ
ಕುರಿತು ನೋಡುವ ನೋಟದ ಕೊಮರಿಯ ಬಗೆ
ಯರಿತೆರಕದೊಳೆರಗಿಪುದು ೧೭

ಕೊಂಕುಗಲಿವ ನೋಟ ಕುಣಿಯಲೆಳಸುವ ಪು
ರ್ಬಂಕೆಗೆ ನಿಲದಭಿಲಾಷೆ
ಬಂಕವಡೆವ ನಡೆವೆತ್ತೆಳೆವೆಂಡಿರ
ಸೋಂಕುವುದವರೊಲವರಿತು ೧೮

ಪೊದೆಯಲೆಳಸುವೆರ್ದೆ ಪುಸಿಯೆನಿಸುವ ನಡು
ಮದವೇರುವ ಮನದಿರವು
ಪದುಳಗೊಳುವ ನಡೆ ಬಗೆಗೊಂಬ ಬಾಲೆಯ
ಬೆದರಿಸದೊಡ[1]ಬಡಿಸು[1]ವುದು ೧೯

ಸಣ್ಣನೆನಿಪ ನಡು ಸನ್ನಾಹವಡುವೆರ್ದೆ
ಬಣ್ಣವೇರುವ ಬಡಬಾಸೆ
ಬಣ್ಣಿಗೆಗೊಳುವ ಬಗೆಯ ಪೊಸವರೆಯದ
ಪೆಣ್ಣಿನೊಲುಮೆಯ ಪೆರ್ಚಿಪುದು ೨೦

೧೭. ಬೇರೆ ಒಂದು ಪೆಂಪು, ಉಬ್ಬಿದ ಹೃದಯ, ಹೊಳೆಯುವ ದೇಹ, ನಿರಿಗೆಗೊಳ್ಳುವ ಉದ್ದವಾದ ಹುಬ್ಬುಗಳು, ದೃಷ್ಟಿಸಿ ನೋಡುವ ನೋಟ- ಇವುಗಳಿಂದ ಕೂಡಿದ ಕುಮಾರಿಯ ಮನಸ್ಸನ್ನು ತಿಳಿದು ಪ್ರೀತಿಯಿಂದ ಅವಳನ್ನು ವಶಪಡಿಸಿಕೊಳ್ಳುವುದು ಉತ್ತಮ. ೧೮. ಕೊಂಕಿನ ನೋಟ, ಕುಣಿಯಲಾಶಿಸುವ ಹುಬ್ಬುಗಳು, ಹತೋಟಿಗೆ ಸಿಲುಕದ ಅಭಿಲಾಷೆ, ಬಿಂಕದ ನಡಿಗೆಗಳನ್ನುಳ್ಳ ಎಳೆಯ ಯೌವನದ ಹೆಂಡತಿಯರನ್ನು ಅವರ ಪ್ರೇಮದ ಸ್ವಭಾವವನ್ನು ತಿಳಿದು ಅನಂತರ ಮುಟ್ಟಬೇಕು. ೧೯. ಸೆರಗಿನಿಂದ ಮುಚ್ಚಿಕೊಳ್ಳುತ್ತಿರುವ ಎದೆ, ಸುಳ್ಳೆನಿಸುವಂತಿರುವ ಸೊಂಟ, ಮದಿಸುವ ಮನಸ್ಸಿನ ಸ್ಥಿತಿ, ಎಚ್ಚರದಿಂದ ಇಡುವ ನಡಿಗೆ - ಇವುಗಳಿಂದ ಮನಸ್ಸನ್ನು ಸೆಳೆಯುವ ಹೆಣ್ಣನ್ನು ಹೆದರಿಸದೆ ಮನಸೊಪ್ಪುವಂತೆ ನಡೆದುಕೊಳ್ಳಬೇಕು. ೨೦. ಸಣ್ಣದಾದ ನಡು, ಉತ್ಸಾಹ ಗೊಳ್ಳುವ ಸ್ತನಗಳು, ರಂಗೇರುವ ತೆಳ್ಳನೆಯ ರೋಮಾವಳಿ, ಕಲ್ಪನೆಗೊಳ್ಳುತ್ತಿರುವ ಮನಸ್ಸು, ಹೊಸ ಪ್ರಾಯ - ಇವುಗಳಿಂದ ಕೂಡಿದ ಹೆಣ್ಣಿನ ಪ್ರೀತಿಯನ್ನು ಹೆಚ್ಚಿಸಬೇಕು.

---

೧. (ಖ) ವೆರಸು

ಗಾಡಿಗಲಿವ ನಡೆ ಗನ್ನವೇರುವ ನುಡಿ
ಮೋಡಿದೋರುವ ಮುದ್ದುನೋಟ
ಮೂಡುವ ಲಜ್ಜೆಯೆಸೆವ ಮುದ್ದುವೆಣ್ಗಳ
ನೀಡುಗೊಳುವುದಿರವರಿತು ೨೧

ಇಂಗಿತಗಳಿನಿದಿರಿಡಲೆಳಸುವ ನೋಟ
ವಂಗಹಾರದೊಳೆಸೆವಂಗ
ವ್ಯಂಗ್ಯವ ಕಲಿವ ಒಳ್ನುಡಿ ಬಗೆಗೊಳೆ ಕೋಮ
ಲಾಂಗಿಯ ಕೂರ್ತೆರಗಿಪುದು ೨೨

ಗಲಗೆಸಗದೆ ಗಾಬರಿಗೊಳಿಸದೆ ಮಿಗೆ
ಕಲಹವ ಗಂಟುವಡಿಸದೆ
ಬಲುಮೆಗೈಯದೆ ಬಾಲೆಯ ಬಣ್ಣಾವಾತಿನಿಂ
ದೊಲಿಸಿಯೊತ್ತಿಗೆ ಬರಿಸುವುದು ೨೩

ನಸುನಾಣ್ಚುವೆಳೆವೆಂಡಿರ ನಲವೇರಿಸಿ
ಬಸಗೈಯದೆ ಬಲ್ಮೆದೋರೆ
ಪೊಸಪೂವ ಸರಗೈದು ಮುಡಿಯದೆ ನಲುಗಿಸಿ
ರಸದೆಗೆವೆಸಕವೆನಿಪುದು ೨೪

೨೧. ಚೆಲುವನ್ನು ಕಲಿಸುವ ನಡಿಗೆ, ಮರೆಮಾಚುವ ಮಾತು, ಬಿಗುಮಾನ ತೋರುವ ಸೌಂದರ್ಯ ನೋಟ, ಹುಟ್ಟುತ್ತಿರುವ ನಾಚಿಕೆ - ಇವುಗಳಿಂದ ಕೂಡಿರುವ ಹೆಣ್ಣುಗಳನ್ನು ಅವರ ಸ್ಥಿತಿಯರಿತು ಒಲಿಸಿಕೊಳ್ಳಬೇಕು. ೨೨. ತಮ್ಮ ಮನಸ್ಸಿನ ಅಭಿಪ್ರಾಯಗಳನ್ನು ಎದುರಿಗೆ ಹೇಳಲು ಬಯಸುವ ನೋಟ, ಮನೋಭಾವ ವನ್ನು ವ್ಯಕ್ತಪಡಿಸುವ ಅಂಗಗಳು, ಅಣಕವನ್ನು ಕಲಿಯುವ ಒಳ್ಳೆಯ ಮಾತು - ಇವು ಕಂಗೊಳಿಸುವಾಗ ಅಂಥ ಕೋಮಲಾಂಗಿಯನ್ನು ಪ್ರೀತಿಯಿಂದ ತನ್ನವಳನ್ನಾಗಿ ಮಾಡಿಕೊಳ್ಳಬೇಕು. ೨೩. ಗದ್ದಲಮಾಡದೆ, ಗಾಬರಿ ಪಡಿಸದೆ, ಜಗಳವನ್ನುಂಟುಮಾಡಿ ತೊಡಕಾಗಿಸದೆ, ಬಲವಂತಮಾಡದೆ ಕುಮಾರಿಯನ್ನು ಬಣ್ಣ ಬಣ್ಣದ ಮಾತುಗಳಿಂದ ಒಲಿಸಿಕೊಂಡು ಹತ್ತಿರಕ್ಕೆ ಬರಮಾಡಿಕೊಳ್ಳಬೇಕು. ೨೪. ಕೊಂಚವಾಗಿ ನಾಚಿಕೊಳ್ಳುವ ಹೊಸ ಹೆಂಡತಿಯರಲ್ಲಿ ಪ್ರೀತಿ ಉಕ್ಕಿಸಿ ವಶಮಾಡಿಕೊಳ್ಳುವುದನ್ನು ಬಿಟ್ಟು ಬಲವನ್ನು ಪ್ರದರ್ಶಿಸಿದರೆ. ಹೊಸ ಹೂವುಗಳನ್ನು ಹಾರಮಾಡಿ ಮುಡಿಯದೆ, ಅವನ್ನು ಬಾಡಿಸಿ

ಬೆದರುವ ಮುದ್ದುವೆಣ್ಣಿಗೆ ಭೀತಿಗಳೆವಂತೆ
ಪದುಳಗೈಯದೆ ಬಲ್ಮೆದೋರೆ
ಸೊದೆಯುಂಡು ಸೊಕ್ಕುವ ಜೊನ್ನವಕ್ಕಿಗೆ ಬಿಸು
ಗದಿರನೂಡುವ ಗೈಮೆಯಂತೆ ೨೫

ಅರಿಯದ ಪೆಣ್ಣನಾದರಿಸಿ ಅಂಜಿಕೆಗಳ
ಪರಿವುಗೈಯದೆ ಬಲ್ಮೆದೋರೆ
ತರಿಸಂದು ಮಳೆಗೆ ಬಾಯ್ದೆರೆವ ಚಾದಗೆಯೊಳು
ಬರಸಿಡಿಲೆರಗಿತೆಂಬಂತೆ ೨೬

ಮುಗುದೆ ನಾಚಿಕೆಗೊಳೆ ಮುದ್ದಿಸಿ ತಿಳುಪದೆ
ಪಗೆ ಸಾಧಿಸಿ ಬಲ್ಮೆದೋರೆ
ಉಗುರೊಳು ಬಾಜಿಪ ಬೀಣೆಗೊನಕೆಗೊಂಬ
ಬಗೆಯೆನಿಪುದು ಭಾವಿಪೊಡೆ ೨೭

ಎರಗಿ ಎರಗದೆಳೆವೆಣ್ಣನೆರಗಿಸದೆ
ಬರಿದೆ ಮುನಿದು ಬಲ್ಮೆದೋರೆ
ಎರೆವ ತಣ್ಣೀರನೆಳಸುವೆಳೆವಳ್ಳಿಗೆ
[1]ತರಿಳ[1]ಗೆಂಡವ ತಳಿವಂತೆ ೨೮

ರಸವನ್ನು ಹಿಂಡಿಹಾಕಿದ ಕೆಲಸದಂತೆ ಆಗುತ್ತದೆ. ೨೫. ಹೆದರುವ ಹೆಣ್ಣಿಗೆ ಮೂಡಿದ ಭಯವನ್ನು ಮೊದಲು ಕಳೆಯಬೇಕು. ಹಾಗೆ ಮಾಡದೆ ಬಲವನ್ನು ತೋರಿಸಿದರೆ, ಬೆಳದಿಂಗಳನ್ನು ಕುಡಿದು ಬೆಳೆಯುವ ಚಕ್ಕವಕ್ಕಿಗೆ ಸೂರ್ಯನು ಬಿಸಿಲನ್ನು ತಿನ್ನಿಸಿದಂತಾಗುತ್ತದೆ. ೨೬. ತಿಳಿವಳಿಕೆ ಸಾಲದ ಹೆಣ್ಣನ್ನು ಆದರದಿಂದ ಕಂಡು, ಅವಳ ಭಯವನ್ನು ಪರಿಹರಿಸದೆ ಬಲವಂತಪಡಿಸಿದರೆ, ಬಹುಕಾಲ ಕಾಯ್ದು ಮಳೆಹನಿಗೆ ಬಾಯ್ಬಿಡುವ ಚಾತಕಪಕ್ಷಿಗೆ ಬರಸಿಡಿಲು ಹೊಡೆದಂತಾಗುತ್ತದೆ. ೨೭. ಮುಗ್ಧಳಾದ ಕನ್ಯೆ ನಾಚಿಕೆ ಪಟ್ಟುಕೊಂಡರೆ ಅವಳನ್ನು ಮುದ್ದುಮಾಡಿ ತಿಳಿವಳಿಕೆ ಮಾಡಿಕೊಡಬೇಕು. ಅದಕ್ಕೆ ಬದಲಾಗಿ ಹಗೆ ಸಾಧಿಸಿ, ಶಕ್ತಿ ಪ್ರದರ್ಶಿಸಿದರೆ ಉಗುರಿನಿಂದ ನುಡಿಸಬೇಕಾದ ವೀಣೆಯನ್ನು ಒನಕೆಯಿಂದ ಬಾರಿಸಿದಂತಾಗುತ್ತದೆ ! ೨೮. ವಶವಾಗದ ಎಳೆಯ ಕುಮಾರಿಯನ್ನು ನಮ್ರತೆಯಿಂದ ವಶಪಡಿಸಿಕೊಳ್ಳದೆ ಸುಮ್ಮಸುಮ್ಮನೆ ಕೋಪಿಸಿಕೊಂಡು ಬಲವನ್ನು ಬಳಸಿದರೆ ಹೊಯ್ಯುವ ತಣ್ಣೀರನ್ನು ಅಪೇಕ್ಷಿಸುವ ಎಳೆಯ ಬಳ್ಳಿಗೆ ಕಟುವಾದ ಕೆಂಡವನ್ನು

---

೧. (ಗ) ತರಿ.

ತರತಮಭಾವವರಿತು ತರುಣಿಯೊಳೊಡ
ವೆರಸಿ ಬಿನದವೆಸಗುವುದು
ತರವರಿಯದೆ ತಲೆಯೊಳು ಪೊತ್ತು ಲಾಲಿಸೆ
ಪರಿಭವಗೈದು ಪಳಿವಳು ೨೯

ತಿಳಿಯದಿನಿಯಳನುವನು ತೀವರವ
ಟ್ಟಳವಳಿ [1]ದಾಲಿ[1] ಪರಿಯದೆ
ಒಳಗರಿತೊಯ್ಯನೊಯ್ಯನೆ ಸೇರುವಿನಿಯನ
ಬಳಿ ಸಲುವರು ಬಾಲೆಯರು ೩೦

ಎರವಿನಿತಿಲ್ಲದಂತೆಳೆವಯದ ಪೆಣ್ಣ
ಸರಿಗೊಂಡು ಸರಸವಾಡುವುದು
ಸರಿಯಲ್ಲೆಂದುಳಿದಿರೆ ಮರವಡುವಳು
ಮರದ ಬೊಂಬೆಯ ಮಾಟದೊಳು ೩೧

ಒತ್ತಿಗೆ ಬರಿಸುವುದೊಮ್ಮೊಮ್ಮೆ ಬಿನದವಾ
ಡುತ್ತ ಭೀತಿಯ ಬಿಡಿಸುವುದು
ಮತ್ತೆ ಮೆಯ್ವಳಿಯೊಳು ಮನ್ನಿಸುವುದು ಚಿತ್ತ
ವೃತ್ತಿಯ ಸೆರೆಯ ಪಿಡಿವುದು ೩೨

ಹೊಯ್ದರೆ ಹೇಗೋ ಹಾಗೆ ಆಗುತ್ತದೆ. ೨೯. ತಾರತಮ್ಯಭಾವವನ್ನು ತಿಳಿದುಕೊಂಡು ತಾರುಣ್ಯದ ಹೆಣ್ಣಿನ ಜೊತೆಯಲ್ಲಿ ಕೂಡಿ ವಿನೋದದಿಂದ ಇರಬೇಕು. ಕ್ರಮವರಿಯದ ಅವಳನ್ನು ತಲೆಯ ಮೇಲೆ ಹೊತ್ತು ಲಾಲಿಸಿದರೆ ಅವಳು ಅವಮಾನಪಡಿಸಿ, ಅವನನ್ನೇ ನಿಂದಿಸಬಹುದು. ೩೦. ಪ್ರಿಯಳ ಒಲವು ಏನೆಂಬುದನ್ನರಿಯದೆ, ಅವಳ ಆಂತರ್ಯ ವೇನೆಂಬುದನ್ನು ಬೇಡಿಕೊಳ್ಳದೆ, ಆತುರದಿಂದ ಆಯಾಸಪಡಿಸುತ್ತ ರಭಸವಾಗಿ ಕೂಡುವ ಗಂಡಂದಿರನ್ನು ಬಾಲೆಯರು ಬಳಲಿಸುವರು. ೩೧. ಸ್ವಲ್ಪವೂ ಭೇದ ವಿಲ್ಲದಂತೆ ಎಳೆಯ ಪ್ರಾಯದ ಹೆಣ್ಣನ್ನು ಸರಿಸಮಾನವಾಗಿ ಕಂಡು ಅವಳೊಡನೆ ಸರಸವಾಡುತ್ತಿರಬೇಕು. ಹಾಗಲ್ಲವೆಂದು ಬಿಟ್ಟರೆ, ಆಕೆ ಮರದ ಗೊಂಬೆಯ ರೀತಿಯಲ್ಲಿ ನಿಶ್ಚೇಷ್ಟಿತಳಾಗುವಳು. ೩೨. ಸಮೀಪಕ್ಕೆ ಬರಮಾಡಿಕೊಳ್ಳಬೇಕು. ಒಮ್ಮೆ ಮನಸ್ಸಿನಲ್ಲಿ ಮೂಡುವ ಭಯವನ್ನು ವಿನೋದವಾಡುತ್ತ ನಿವಾರಿಸಬೇಕು. ಪುನಃ ಅವಳಿಗೆ

---

೩. (ಗ) ದಾರಿ.

ಬಿನದವಾತನು ಬೆಸಗೊಳೆ ಪೆರಸಾರದೆ
ಮುನಿಯದೆ ಮೋಡಿಯೊಳಿರದೆ
ಇನಿಸು ನಾಚಿಕೆಗೊಂಡೆರಗಿದ ನುಣ್ಮೊಗ
ದಿನಿಯಳನೆದೆಗರಗಿಪುದು ೩೩

ಮುಂಜೆರಗನು ಪಿಡಿದೊಡನೆ ಬಾಗಿದ ಮುಖ
ಕಂಜದ ಪದುಗುವೊಡಲಿನ
ಅಂಜುವ ಮನದೆಳವರೆಯದ ನೀರೆಯ
ನಂಜಿಸದನುಸರಿಸುವುದು ೩೪

ಸರಸವೆಸಗಿ ಕೈಸಾರ್ಚಿದೊಡನೆ ಮಿಗೆ
ಮೊರೆದೇಳುವ ಮೈನವಿರ
ಮುರಿಗೊಳುವಂಗದ ಮೊಳೆವ ಬೆಮರ "ವರ"
ತರುಣಿಯನೆದೆಗರಗಿಪುದು ೩೫

ಒದವಿ ಕೈಸೋಂಕಿದೊಡನೆ ಹದುಗುವ ಮೆಯ್ಯ
ಕದುಬುವ ಸಕಲ ಕರಣದ
ಬೆದರುವ ಕಣ್ಣ ಬೆಚ್ಚುವ ಮನದೆಳೆಯಳ
ಎದೆಗರಗಿಪುದಿಚ್ಛೆಯರಿತು ೩೬

ಅಧೀನನಾಗಿ[೧] ಆದರಿಸಿ ಹೆಣ್ಣಿನ ಮನಸ್ಸನ್ನು ಸೆರೆಹಿಡಿಯಬೇಕು. ೩೩. ಸರಸದ ಮಾತನ್ನು ತಮಾಷೆಗಾಗಿ ಆಡಿದಾಗ ಹಿಂಜರಿಯದೆ, ಕೋಪಿಸಿಕೊಳ್ಳದೆ, ಅಹಂಕಾರ ದಿಂದ ವರ್ತಿಸದೆ, ಕೊಂಚ ನಾಚಿಕೆಯಿಂದ ಹತ್ತಿರ ಬಂದ ಸುಂದರಮುಖದ ಪ್ರಿಯ ಳನ್ನು ಹೃದಯಕ್ಕೆ ಹತ್ತಿರದವಳನ್ನಾಗಿ ಮಾಡಿಕೊಳ್ಳಬೇಕು. ೩೪. ಸೆರಗಿನ ತುದಿಯನ್ನು ಹಿಡಿದ ಕೂಡಲೆ ತಗ್ಗಿಸಿದ ಮುಖಕಮಲದ, ಹುದುಗಿದ ಶರೀರದ, ಭಯಗ್ರಸ್ತಳಾದ ಎಳೆಯ ಪ್ರಾಯದ ಹೆಣ್ಣನ್ನು ಮತ್ತಷ್ಟು ಹೆದರಿಸದೆ ಅನುಸರಿಸಿ ನಡೆಯುವುದು ಸರಿ ಯಾದ ಮಾರ್ಗ. ೩೫. ಸರಸದಿಂದ ಕೈಹಿಡಿದು ಎಳೆದ ಕೂಡಲೆ ರೇಗಿಬೀಳುವ, ದೇಹ ವನ್ನು ಸೆಟೆದುಕೊಂಡು ಶರೀರದಲ್ಲಿ ಬೆವರುವ ಹೆಣ್ಣನ್ನು ತನ್ನವಳನ್ನಾಗಿ ಮಾಡಿಕೊಳ್ಳ ಬೇಕು. ೩೬. ಸಮೀಪಿಸಿ ಕೈಯನ್ನು ಮುಟ್ಟಿದೊಡನೆ ರೋಮಾಂಚನಗೊಳ್ಳುವ, ಅವ ಯವಗಳನ್ನು ಸಂಕೋಚಗೊಳಿಸುವ, ಬೆವರುವ ಹೆಣ್ಣನ್ನು ಅವಳ ಮನಸ್ಸಿನ ಇಷ್ಟವನ್ನು

---

೧. ಮೆಯ್ಪುಳಿ - ಅಧೀನತೆ.

೪. (ಕ, ಗ) ಕುಲ.

ಪಿಡಿಯೆ ಮುಂಗೈಯ ಜಡಿದು ಮುರಿದಲಸುವ
ಕುಡುವುರ್ಬುಗಳ ಗುಡಿಗೊಳಿಪ
ಬಿಡು ಬಿಡೆಂದೊಮ್ಮೊಮ್ಮೆ ಬೆಚ್ಚ ಬಿನ್ನವಿಪೆಳೆ
ವಡದಿಯನೊಡಬಡಿಸುವುದು ೩೭

ಜಡೆಯ ತುಡುಕಿ ಪಿಡಿದೊಡನೆ ಘರಿಕ್ಕನೆ
ಮಡಮುರಿದೆಸೆವೊಳ್ಮೊಗದ
ಅಡವಾಯುವ ಕೂರ್ನೋಟದ ಕೊಮರಿಯ
ನೊಡಬಡಿಸುವುದೊಲಿಸುವುದು ೩೮

ಸೋಂಕಲೆಳಸೆ ಸುಕ್ಕುವ ಪೊಂಜೆಳೆಮೆಯ್ಯ
ಕೊಂಕಿದ ಕುಡುವುರ್ಬುಗಳ
ಭೋಂಕನೇಳುವ ನವಿರುಗಳೆಳವರೆಯದ
ಬಿಂಕಗಾತಿಯ ಬೆರಸುವುದು ೩೯

ಕನಲಿ ಕಲ್ಲೆರ್ದೆಯವಳೆಂದಲ್ಲಗಳೆಯದೆ
ಮನಮುರಿಯದೆ ಮಚ್ಚರಿಸದೆ
ಅನುನಯ ವಚನದಿಂದನುಗೊಳಸುವನಿಗೆ
ಮನವೀವರೆಳೆವಡದಿಯರು ೪೦

ತಿಳಿದು ಒಲಿಸಿಕೊಳ್ಳಬೇಕು. ೩೭. ಮುಂಗೈಯನ್ನು ಹಿಡಿಯಲೊಡನೆ ಕೊಸರಿ ಹಿಂದೆ ಸರಿಯುವ, ಕೊಂಕುಹುಬ್ಬುಗಳನ್ನು ಗಂಟಿಕ್ಕಿಕೊಳ್ಳುವ, 'ಬಿಡು ಬಿಡು' ಎಂದು ಬೆಚ್ಚುತ್ತ ಬೇಡಿಕೊಳ್ಳುವ ಎಳೆಯ ಹೆಂಡತಿಯನ್ನು ಒಪ್ಪಿಸಿಕೊಳ್ಳಬೇಕು. ೩೮. ಜಡೆಯನ್ನು ಹಿಡಿದ ಕೂಡಲೆ ಹಿಮ್ಮೆಟ್ಟಿ ನಿಲ್ಲುವ ಸುಂದರ ಮುಖದ, ಅಡ್ಡಹಾಯುವ ಚುಚ್ಚುದೃಷ್ಟಿ ಯಿಂದ ಕುಮಾರಿಯನ್ನು ಒಪ್ಪಿಸಬೇಕು. ೩೯. ಮುಟ್ಟಲು ಹೋದರೆ ಮುದುಡಿ ಕೊಳ್ಳುವ, ಬಳುಕುವ ದೇಹದ, ಕೊಂಕು ಹುಬ್ಬಿನ ಕೂಡಲೆ ರೋಮಾಂಚನಗೊಳ್ಳುವ ಎಳೆಪ್ರಾಯದ ಬಿನ್ನಾಣಗಿತ್ತಿಯನ್ನು ವಶಪಡಿಸಿಕೊಳ್ಳಬೇಕು. ೪೦. ಕೋಪಗೊಂಡು ನೀನು ಕಠಿನಹೃದಯದವಳು ಎಂದು ಆಕ್ಷೇಪಿಸದೆ, ಅವಳ ಮನಸ್ಸನ್ನು ಕೆಡಿಸದೆ, ಆಕೆಯ ಮೇಲೆ ಮತ್ಸರಬೀಳದೆ ನಯವಾದ ಮಾತುಗಳಿಂದ ಯಾರು ಅನು

ನೆರೆಜವ್ವನದ ನೀರೆಯೊಳೆರವೆಣಿಸದೆ
ಮರೆಮಾಜಿ ಮನಮುರಿಯಿಸದೆ
ಎರಕವೆರಸಿ ಮನೆವಾಳ್ತೆಯ ಭಾರವ
ಪೊರಿಸಿ ಪುದುಗುವಡಿಸುವುದು ೪೧

ಆಯಿತಾಯಿತು ಎಂದಲ್ಲಗಳೆಯದೆ ತ
ನ್ನಾಯುವನವಳಿಗರುಹದೆ
ಆಯ ಬೀಯವನವಳೊಡನಾಳೋಚಿಸಿ
ಕೈಯಡಕದೊಳಿರಿಸುವುದು ೪೨

ಎನ್ನವಳೆಂದೆರಕದೊಳೀವುದು ಪೊನ್ನ
ರನ್ನವ ಪೊಸದುಗುಲಗಳ
ತನ್ನ ಶಕ್ತಿಯ ವಂಚಿಸದೆ ಮನದನ್ನಳ
ನುನ್ನತಿವಡಿಸುವುದೊಲಿದು ೪೩

ತನ್ನ ಪೆರ್ಚುಗೆಯೊಳು ಪೆರ್ಚುಗೆಗೊಂಡುರೆ
ತನ್ನ ಕುಂದಿನೊಳು ಕುಂದುವಳ
ತನ್ನ ಮೆಯ್ಯೊಳಗರೆಮೆಯ್ಯೆನಿಸುವ ಮನ
ದನ್ನಳ ಮನ್ನಿಪುದೊಲಿದು ೪೪

ಗೊಳಿಸುತ್ತಾರೆಯೋ ಅಂಥವರಿಗೆ ಎಳೆಹೆಂಡತಿಯರು ಮನಸ್ಸನ್ನು ತೆರುತ್ತಾರೆ. ೪೧. ಯೌವನದ ಸ್ತ್ರೀಯರಲ್ಲಿ ಭೇದವನ್ನು ಬಗೆಯದೆ, ಮರೆಮಾಚದೆ, ಮನಸ್ಸನ್ನು ಮುರಿಯದೆ, ಪ್ರೀತಿಯಿಂದ ಸಂಸಾರಭಾರದ ಜವಾಬ್ದಾರಿಯನ್ನು ವಹಿಸಿ ಹೊಂದಿಕೆ ಮಾಡಿಕೊಳ್ಳಬೇಕು. ೪೨. 'ಆಯ್ತು ಆಯ್ತು' ಎಂದು ಅಲಕ್ಷ್ಯಮಾಡದೆ, ತನ್ನ ಆದಾಯವನ್ನು ಅವಳಿಗೆ ತಿಳಿಸದೆ, ಜಮಾಖರ್ಚನ್ನು ಅವಳೊಡನೆ ಆಲೋಚಿಸಿ ಅವಳನ್ನು ತನ್ನ ಕೈಯಳತೆಯಲ್ಲಿಟ್ಟುಕೊಳ್ಳಬೇಕು. ೪೩. 'ಇವಳು ನನ್ನವಳು' ಎಂದು ತಿಳಿದು ಪ್ರೀತಿಯಿಂದ ಹೊನ್ನು, ರತ್ನ, ಹೊಸವಸ್ತ್ರಗಳನ್ನು ಆತ್ಮವಂಚನೆಯಿಲ್ಲದೆ ಕೊಟ್ಟು ನಲ್ಲೆಯ ಅಭ್ಯುದಯವನ್ನು ಕಾಣಬೇಕು. ೪೪. ತನ್ನ ಅಭಿವೃದ್ಧಿಯಲ್ಲಿ ಹೆಮ್ಮೆಪಡುವ, ತನ್ನ ನಷ್ಟದಲ್ಲಿ ಕುಂದುವ, ತನ್ನ ಶರೀರದ ಅರ್ಧ ಶರೀರ ತಾನು ಎನ್ನುವ ಮನಃಪ್ರಿಯೆಯನ್ನು

ಉಡದಿರೆ ಮಡಿಯುಡದುಣದಿರೆ ಸರಿಯುಣ
ದೊಡವೆಯ ತೊಡದಿರೆ ತೊಡದೆ
ಎಡವಿಡದಿನಿಯನಡಿಯ ನೆಳಲನು ಪಡಿ
ಏಡಿವ ಮಡದಿಯ ಮನ್ನಿಪುದು ೪೫

ನಿನ್ನದೆನ್ನದು ನೀ ನಾನು ನಿನ್ನವರಿವ
ರೆನ್ನವರಿವರುಗಳೆಂದು
ತನ್ನನಿಯಳ ತನ್ನೊಡವೆಯ ಮೈ ಬಳಗವ
ಭಿನ್ನಗೈಯದೆ ಬೆರಸುವುದು ೪೬

ಮನದೊಳು ಮನ ನೆನಹಿನೊಳು ನೆನಹು ಮತ್ತೆ
ತನು ತನುವಿನೊಳೊಡವೆರಸಿ
ಅನುಗೊಳೆ ಪಾಲುನೀರುಗಳಂತಿನಿಯನು
ಮಿನಿಯಳುಮೇಕವೆನಿಪುದು ೪೭

ಎಳೆಜವ್ವನ ಮೊದಲಿಂದುವರೆಗಮೆನ್ನ
ಬಳಿಸಂದು ಬಾಳಿದಳೆಂದು
ಇಳಿವ ಜವ್ವನದೊಳಗೆರವುದೋರದೆಯೆಂದಿ
ನೊಳು ನೇಹವನೊಡರಿಪುದು ೪೮

ಪ್ರೀತಿಯಿಂದ ಗೌರವಿಸಬೇಕು. ೪೫. ಗಂಡನು ಒಳ್ಳೆಯ ಬಟ್ಟೆಯನ್ನುಡದಿದ್ದಾಗ ತಾನೂ ಒಳ್ಳೆಯ ಬಟ್ಟೆಯನ್ನುಡದೆ, ಅವನು ತಿನ್ನದಿದ್ದರೆ, ತಾನೂ ಸವಿಯಾದ್ದನ್ನು ತಿನ್ನದೆ, ಒಡವೆಯನ್ನು ಧರಿಸದಿದ್ದರೆ ತಾನೂ ಧರಿಸದೆ ಯಾವಾಗಲೂ ಪ್ರಿಯನ ಅಡಿಯ ನೆಳಲನ್ನು ಅನುಸರಿಸುವ ಮಡದಿಯನ್ನು ಗೌರವದಿಂದ ಕಾಣಬೇಕು. ೪೬. ನಿನ್ನದೇ ನನ್ನದು, ನೀನೇ ನಾನು, ನಿನ್ನ ನೆಂಟರು ನನ್ನವರೇ ಎಂದು ತನ್ನ ನಲ್ಲೆಯನ್ನು ತನ್ನ ಒಡವೆ, ಬಂಧುಗಳನ್ನು ಭೇದಭಾವದಿಂದ ಪರಿಗಣಿಸದೆ ಕೂಡಬೇಕು. ೪೭. ಮನಸ್ಸಿನಲ್ಲಿ ಮನಸ್ಸು, ಬಯಕೆಯಲ್ಲಿ ಬಯಕೆ, ಮತ್ತೆ ದೇಹದಲ್ಲಿ ದೇಹ, ಜೊತೆಯಾಗಿ ಸೇರಿ ಅನುಸರಿಸಿ ಬಾಳಿದರೆ ಹಾಲು ನೀರುಗಳಂತೆ - ನಲ್ಲನಲ್ಲೆಯರು ಒಂದಾಗಿ ಬಾಳುತ್ತಾರೆ. ೪೮. ಯೌವನದ ಪ್ರಾರಂಭದಿಂದ ಇಲ್ಲಿಯವರೆಗೆ ನನ್ನ ಬಳಿಗೆ ಬಂದು ಬಾಳಿದ್ದಾಳೆಂದು ತಿಳಿದು ಯೌವನದ ಕೊನೆಯಲ್ಲೂ ಭೇದವನ್ನು ತೋರಿಸದೆ

ಎಣಿಕೆಗೈವೊಡೆ ರೂಪು ಜವ್ವನಮಿದ್ದೇನು
ಗುಣಮಿಲ್ಲದ ಕುಲಸತಿಗೆ
ಗುಣಕರುಗೊಂಡಿರೆ ಕೂರ್ತೆಂದೆಂದಿಗು
ಮೆಣೆ ಬಿಚ್ಚದೇಕವೆನಿಪುದು ೪೯

ಎರವಿಲ್ಲದೇಕವೆನಿಸಿ ಧರ್ಮದೊಳು ಸಂ
ಸರಿಸುವ ಸತಿಪತಿಗಳಿಗೆ
ಪುರುಷೋತ್ತಮನಡಿಗಳ ಪೂಜೆಯಿಂದಿಹ
ಪರಸುಖ ಪದುಳಗೊಳುವುದು ೫೦

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಉನ್ನತಿವಡೆದೊಪ್ಪಿದುದಾರನೆಯ ಸಂಧಿ
ಸನ್ನುತ ಗುಣಸಂಬಂಧಿ ೫೧

ಎಂದಿನಂತೆಯೇ ಸ್ನೇಹವನ್ನು ಉಳಿಸಿಕೊಳ್ಳಬೇಕು. ೪೯. ಯೋಚಿಸುವುದಾದರೆ ಕುಲಸತಿಗೆ ಗುಣವಿಲ್ಲದಾಗ ರೂಪು ಯೌವನಗಳಿದ್ದರೂ ಪ್ರಯೋಜನವಿಲ್ಲ. ಪ್ರೀತಿಯಿಂದ ಗುಣಗಳು ಕೂಡಿದ್ದರೆ ಸಮಭಾವ ಒಡೆಯದೆ ಒಂದಾಗಿರುವುದು ಸಾಧ್ಯ. ೫೦. ಭೇದವಿಲ್ಲದೆ ಒಂದಾಗಿ, ಧರ್ಮಾಚರಣೆಯಲ್ಲಿ ಹೊಂದಿಕೊಂಡಿರುವ ಗಂಡ ಹೆಂಡಿರಿಗೆ ಪುರಷೋತ್ತಮನ ಪಾದಪೂಜೆಯಿಂದ ಲಭಿಸುವ ಪರಲೋಕದ ಸುಖ ದೊರಕುತ್ತದೆ. ೫೧. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮನು ರಚಿಸಿದ ಕಾವ್ಯದಲ್ಲಿ ಶ್ಲಾಘನೀಯ ಗುಣಯುಕ್ತವಾದ ಆರನೆಯ ಸಂಧಿ ಉನ್ನತ ರೀತಿಯಲ್ಲಿ ಸಮಾಪ್ತವಾಯಿತು.

# ಏಳನೆಯ ಸಂಧಿ

ವಂದಾರು ಜನಕೆ ವಾಂಛಿತ ಫಲಗಳನೀವ
ಮಂದಾರತರುಗೆ ಮಾಧವಗೆ
ಕುಂದುಗಳಿಲ್ಲದೆ ಗುಣಕರುಗೊಂಡ ಮು
ಕುಂದನಿಗಾನು ವಂದಿಪೆನು ೧

ಪುರುಷೋತ್ತಮನೆದೆಯೊಳು ಪುದುಗಿರ್ದುವ
ನಿರವರಿತೆಲ್ಲ ಲೋಗರೊಳು
ಕರುಣಾಮೃತವ ಕರೆಗಣ್ಮಿಸಿ ಪರಿಸುವ
ಸಿರಿರಾಣಿಯಡಿಯ ಸೇವಿಪೆನು ೨

ನೆರೆಯೂರಿಗೆ ಪೋಗಿ ನಲ್ಲನೈತರದಿರೆ
ಬರವ ಬಯಸಿ ಬಸವಳಿದು
ವಿರಹಿಣಿಯರ ನಡತೆಯ ಬಿತ್ತರಗಳ
ನೊರೆವೆನುಚಿತವೆಂಬಂತೆ ೩

ಸೋಗೆಮುಗಿಲ ಸೂರ್ಯನ ಸರಸೀರುಹ
ಸಾಗರವೇಲೆ ಚಂದ್ರಮನ
ಕೋಗಿಲೆ ಸುಗ್ಗಿ ಕೂರ್ಪಂತೆ ಸತಿಯನು
ರಾಗದಿನಿಯನ ಜಾನಿಪಳು ೪

೧. ಭಕ್ತರಿಗೆ ಅಪೇಕ್ಷಿಸಿದ ಫಲಗಳನ್ನು ಕೊಡುವ ಕಲ್ಪವೃಕ್ಷದಂತಿರುವ ಮಾಧವನಿಗೆ, ದೋಷರಹಿತನಾಗಿ ಸದ್ಗುಣಗಳಿಂದ ತುಂಬಿದ ಮುಕುಂದನಿಗೆ ನಾನು ನಮಸ್ಕರಿಸುತ್ತೇನೆ. ೨. ಪುರುಷೋತ್ತಮನ ಹೃದಯದಲ್ಲಿ ನೆಲೆಸಿ ಅವನ ಅಂತರಂಗವನ್ನು ತಿಳಿದು ಜನರಲ್ಲಿ ಕರುಣಾಮೃತವನ್ನು ಹರಿಸುವ ಲಕ್ಷ್ಮೀದೇವಿಯ ಪಾದಗಳನ್ನು ಸೇವಿಸು ತ್ತೇನೆ. ೩. ಪ್ರಿಯನು ಊರಿಗೆ ಹೋಗಿ ಹಿಂದಿರುಗಿ ಬರದಿದ್ದಾಗ ಅವನ ಬರವನ್ನು ಬಯಸಿ ತಾಪಗೊಳ್ಳುವ ವಿರಹಿಣಿಯರ ಸ್ವಭಾವದ ವಿವರಣೆಯನ್ನು ಯುಕ್ತ ರೀತಿಯಲ್ಲಿ ಮಾಡುತ್ತೇನೆ. ೪. ನವಿಲು ಮೋಡವನ್ನು, ಕಮಲವು ಸೂರ್ಯನನ್ನು, ಸಾಗರದ ಅಲೆಗಳು ಚಂದ್ರನನ್ನು, ಕೋಗಿಲೆ ಚೈತ್ರವನ್ನು ಪ್ರೀತಿಸಿ ಕಾಯುವಂತೆ ಸತಿಯಾದವಳು

ನೆನೆವಳವನ ನೆರೆ ಸೊಗಸೊಳುವಗೆಗಳ
ನೆನೆವಳವನ ಮೈಸಿರಿಯ
ನೆನೆವಳವನ ನೇಹದೆಸಕದಿರವನಿಂತು
ನೆನೆನೆನೆದಿಂಪುಗೊಳುವಳು ೫

ದೇವರಿಲ್ಲದ ದೇಗುಲದ ಬಿತ್ತರದಂತೆ
ಭೂವರನಿಲ್ಲದೂರಂತೆ
ಜೀವಿತೇಶ್ವರನ ವಿರಹದೊಳು ಸೆಜ್ಜೆಯ
ಭಾವಿಸಿ ಬಣ್ಣಗುಂದುವಳು ೬

ಕೆಲದೊಳು ಕೆಳದಿಯರಿರೆ ಸೈರಿಸದೊಂದು
ಕೆಲಸದ ನೆವದಿಂದ ಕಳುಪಿ
ಒಲಿದೋಪನೊಳ್ಳಿತಂದೊಪ್ಪವ ನೆನೆನೆನೆ
ದಲಸಿ ಮೈಮುರಿದೊರಲುವಳು ೭

ತಲೆವಾಗಿಲೊಳು ದಾರಿಗರ ನೋಡಲೆಳಸದೆ
ನೆಲೆವಾಡವೇರಿ ನಿಟ್ಟಿಸದೆ
ಒಲಿದಿನಿಯನ ನಲ್ಬಗೆಯ ನೆನಹಿನೊಳು
ನೆಲೆನಿಂದು ನೇಮಗೊಳುವಳು ೮

ಅನುರಾಗದಿಂದ ಗಂಡನನ್ನು ಧ್ಯಾನಿಸುತ್ತ ಇರುತ್ತಾಳೆ. ೫. ಪ್ರಿಯನ ಹೆಚ್ಚಾದ ಸೊಗಸನ್ನೂ ಅಂತರಂಗದ ಬಗೆಗಳನ್ನೂ ಅವನ ದೇಹಸಂಪತ್ತನ್ನೂ ಅವನ ಪ್ರೇಮದ ಕಾರ್ಯಗಳನ್ನೂ ನೆನೆಸಿನೆನೆಸಿಕೊಂಡು ಆನಂದಪಡುತ್ತಾಳೆ. ೬. ಪತಿಯ ವಿರಹಕಾಲ ದಲ್ಲಿ ತನ್ನ ಶಯ್ಯೆಯನ್ನು ದೇವರಿಲ್ಲದ ಗುಡಿಯ ವಿಸ್ತಾರದಂತೆ, ರಾಜನಿಲ್ಲದ ಊರಿನಂತೆ ಕಲ್ಪಿಸಿಕೊಂಡು ಕಳೆಗುಂದುತ್ತಾಳೆ. ೭. ಅಕ್ಕಪಕ್ಕದಲ್ಲಿ ಸಖಿಯರಿದ್ದರೆ ತಾಳ್ಮೆಯಿಲ್ಲದೆ ಯಾವುದಾದರೂ ಒಂದು ನೆವದಿಂದ ಅವರನ್ನು ಕಳಿಸಿಕೊಟ್ಟು, ಪ್ರೀತಿಪಾತ್ರನಾದ ಪತಿಯ ಒಳ್ಳೆಯ ನಡತೆಯನ್ನು ನೆನೆನೆನೆದು ಆಯಾಸಗೊಂಡು ಮೈಮುರಿಯುತ್ತ ದುಃಖಿಸುವಳು. ೮. ಬೀದಿಯ ಬಾಗಿಲಿನಲ್ಲಿ ಹೋಗಿಬರುವವರನ್ನು ನೋಡಲು ಬಯಸುವುದಿಲ್ಲ. ಮಹಡಿಯನ್ನು ಹತ್ತಿ ನೋಡುತ್ತ ಇರುವುದಿಲ್ಲ. ಪ್ರೀತಿಸಿದ ಗಂಡನ ಒಳ್ಳೆಯ ಮನಸ್ಸನ್ನು ನೆನಪಿಗೆ ತಂದುಕೊಂಡು ಹಾಗೆಯೇ ಚಿಂತಿಸುತ್ತ ನಿಯಮದಿಂದ

ಪರಿಪರಿಯುಡೆ ತೊಡವುಗಳ ಪೂಸರಗಳ
ಪರಿಮಳದಣ್ಪ ಬಯಸದೆ
ಗರತಿಯರಿದನುಳಿದಿರಲಾಗದೆಂಬಲಂ
ಕರಣ ಮಾತ್ರವ ಧರಿಸಿಹಳು ೯

ಮಂಗಳಕರ ಮಾತ್ರವನಲ್ಲದೆ ಮಿಕ್ಕ
ಸಿಂಗರಗಳನು ಚಿಂತಿಸದೆ
ಸಂಗಾತಿವೆಂಗಳ ಸರಸಭಾಷಣವ ಮ
ನಂಗೊಳಿಸದೆ ಮರುಗುವಳು ೧೦

ಪಾಯಸ ಪರಮಾನ್ನವ ಪಲಬಗೆಯ ಕ
ಜ್ಜಾಯವ ಕಾಯಿಪಣ್ಣುಗಳ
ಬಾಯ ಸವಿಗೆ ಬಯಸದೆ ಅನ್ನಪಾನಾದಿ
ಕಾಯಧಾರಣೆಯೆಸಗುವಳು ೧೧

ಮನೆಮಕ್ಕಳು ಮನೆವಾಳ್ತೆಯೊಳು ತನ್ನ
ಧನ ಧಾನ್ಯದಾಯ ಬೀಯದೊಳು
ತನುವಿನಾರೈಕೆಗಳೊಳು ತಾನೆರಗದ
ಮನದಿಂದ ಮರುಳೆನಿಸುವಳು ೧೨

ಎನ್ನ ತನ್ನವರೆಂದವರಿವರನು ಮಿಗೆ
ಮನ್ನಿಸಿ ಮನೆಗೆ ಬರಿಸದೆ
ಮನ್ನಿಸಿ ಕರೆವರ ಮನೆಗೆ ಪೋಗದೆ ಮನ
ದನ್ನನ ನೆನಹಿನೊಳಿಹಳು ೧೩

ಇರುವಳು. ೯. ವಿವಿಧ ರೀತಿಯ ಒಡವೆ ವಸ್ತ್ರಗಳನ್ನು, ಹೂವುಗಳನ್ನು, ಸುವಾಸನಾ ದ್ರವ್ಯಗಳನ್ನು ಬಯಸದೆ, ಗೃಹಿಣಿಯರಿಗೆ ಅಗತ್ಯವಾದಷ್ಟು ಅಲಂಕಾರಗಳನ್ನು ಮಾತ್ರ ಧರಿಸಿರುತ್ತಾಳೆ. ೧೦. ಮಂಗಳಕರವಾದ ಶೃಂಗಾರಗಳನ್ನು ಮಾತ್ರ ಧರಿಸಿ, ಉಳಿದವುಗಳ ಬಗ್ಗೆ ಯೋಚನೆಯನ್ನೇ ಮಾಡದೆ, ಜೊತೆಯವರ ಸರಸ ಸಂಭಾಷಣೆಗಳನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಚಿಂತಾತುರಳಾಗಿರುತ್ತಾಳೆ. ೧೧. ಪಾಯಸ, ಉತ್ತಮವಾದ ಹಲವು ಬಗೆಯ ಭಕ್ಷ್ಯಗಳು, ಕಾಯಿಹಣ್ಣುಗಳು - ಇವುಗಳನ್ನು ಬಾಯಿರುಚಿಗಾಗಿಯೂ ಬಯಸದೆ ಶರೀರದ ಇರುವಿಕೆಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಸ್ವೀಕರಿಸುತ್ತಾಳೆ. ೧೨. ಮನೆ, ಮಕ್ಕಳು, ಸಂಸಾರ, ತನ್ನ ಆಸ್ತಿ, ಫಸಲು, ಆದಾಯ ವೆಚ್ಚ, ದೇಹದ ಆರೈಕೆ - ಇವುಗಳಾವುದರಲ್ಲೂ ಮನಸ್ಸಿಡದೆ, ಬೇಸರದಿಂದ ಭ್ರಮಿತಳಂತೆ ವರ್ತಿಸುತ್ತಾಳೆ. ೧೩. ಇವರು ತನ್ನವು ಎಂದು ಹೆಚ್ಚು ಆದರದಿಂದ ಅವರನ್ನು ಮನೆಗೆ ಬರಮಾಡಿಕೊಳ್ಳದೆ, ಆದರದಿಂದ ಕರೆದವರ ಮನೆಗೂ ಹೋಗದೆ ಮನಃಪ್ರಿಯನ ಧ್ಯಾನದಲ್ಲಿಯೇ

ಎಡಬಲದವರಿಂತಿಂತು ನುಡಿವರೆಂದು
ತಡೆದು ತನ್ನಿಚ್ಚೆಯೊಳಿರದೆ
ಎಡೆವಿಡದಿನಿಯನ ನೆನೆದು ನೇಮದೊಳಿರ್ಪ
ಮಡದಿಗೆ ಮತ್ತೆಣೆಯುಂಟೆ ೧೪

ನಗುವರು ನಗಲಿ ನಾಚುವರು ನಾಚಲಿ ಮಿಗೆ
ಮೊಗದಿರುಹುವರು ತಿರುಹಲಿ
ಬಗೆಯದದನು ಭಾವಿಪಳು ತನ್ನಿನಿಯನ
ನಗೆನೋಟ ನಡೆನುಡಿಗಳನು ೧೫

ನಿರಿಗೊಂಡ ಪುರ್ಬಿನ ನೆಲೆನಿಂದ ನಿಡುಗಣ್ಣ
ಅರಿಕೆಗುಂದಿದ ಕರಣಗಳ
ಒರೆವ ಕಣ್ಣೀರೊಪ್ಪದಿಂದೊಳ್ಗೆಳದಿಗೆ
ಮರುಕವ ಮನಗೊಳಿಸುವಳು ೧೬

ಕೆಂದಳಿರ್ಗೈದಳದೊಳಗಿಟ್ಟು ಗಲ್ಲದ
ಕಂದಿದ ಮೊಗದಾವರೆಯ
ಸಂದಣಿಸುವ ನಿಟ್ಟುಸುರ ನೆಲೆಯೊಳಿ
ದ್ವಂದಗೆಡಿಪಳಾಳಿಯನ ೧೭

ಇರುತ್ತಾಳೆ. ೧೪. ನೆರೆಹೊರೆಯವರು ಹಾಗೆ, ಹೀಗೆ ಎಂದು ಆಕ್ಷೇಪಿಸುತ್ತಾರೆ ಎಂದು ಗಮನಿಸದೆ, ಸ್ವತಂತ್ರವಾಗಿ ನಡೆಯದೆ, ಒಂದೇ ಸಮನಾಗಿ ಗಂಡನನ್ನು ನೆನೆಯುತ್ತ ನಿಷ್ಠೆಯಿಂದಿರುವ ಹೆಂಡತಿಗೆ ಸಮಾನರಾದವರು ಯಾರಿದ್ದಾರೆ ? ೧೫. ನಕ್ಕವರು ನಗಲಿ, ಲಜ್ಜೆಪಡುವವರು ನಾಚಿಕೆಪಟ್ಟುಕೊಳ್ಳಲಿ, ಮುಖ ಸೊಟ್ಟಮಾಡುವವರು ಸೊಟ್ಟ ಮಾಡಲಿ, ಅವುಗಳೊಂದನ್ನೂ ಲಕ್ಷಿಸದೆ ತನ್ನ ಕಾಂತನ ನಗೆನೋಟವನ್ನೂ ಸರಸ ಸಲ್ಲಾಪಗಳನ್ನೂ ನಡೆಗಳನ್ನೂ ಯೋಚಿಸುತ್ತಿರುತ್ತಾಳೆ. ೧೬. ನೆರೆಗೊಂಡ ಹುಬ್ಬುಗಳಿಂದ ದೃಷ್ಟಿ ನಿಂದ ಕಣ್ಣುಗಳಿಂದ, ಚಲನರಹಿತ ಇಂದ್ರಿಯಗಳಿಂದ, ಸುರಿಯುವ ಕಣ್ಣೀರಿನಿಂದ, ತನ್ನ ಆತ್ಮಸಖಿಗೆ ತನ್ನ ದುಃಖತಾಪವನ್ನು ತಿಳಿಸುವಳು. ೧೭. ಕೆಂದಳಿರಿನಂತಿರುವ ಅಂಗೈ ಮೇಲೆ ಗಲ್ಲವಿಟ್ಟು, ಕಂದಿದ ತಾವರೆಯಂತಿರುವ ಮುಖದಿಂದ, ಒಟ್ಟಾಗಿ ಬರುವ

ಕವಿವ ಕುರುಳ ಸಡಿಲಿದ ಚೊಲ್ಲೆಹ
ದೆವೆಯಿಕ್ಕದೆಸಳುಕಣ್ಣುಗಳ
ಸವೆಯದ ನೆನಹಿನ ಸೈಪಿಂದ ಕೆಳದಿಗೆ
ಸವನಿಸುವಳು ಸಂಕಟವನು ೧೮

ಪಡಿಮೊಗದೊಳು ನಿಂದು ಬಾಯಿಟ್ಟು ಕರೆದೊಡ
ಮೊಡಲನಲುಗಿದೊಡಮದಕೆ
ಒಡನೆಚ್ಚರದೋಜೆಯಿಂದ ಕೆಳದಿಯರ
ಗಡಣವ ಕೈಗೆಡಿಸುವಳು ೧೯

ಎಲೆಯಕ್ಕ ನೀನೇತಕಿಂತು ಚಿಂತಿಪೆಯೆಂ
ಬುಲಿಗೇಳಿದೊಡನುರವಣಿಸಿ
ಕೆಲದಲ್ಲಿ ನಿಂದವರೊಳು ಕೇಣವೆಸಗುತ
ನೆಲೆಗೆಡಿಸುವಳು ನೇಹಿಗರ ೨೦

ಎನ್ನಿನಿಯನ ಪಾದಸೇವೆಯಲ್ಲದೆ ನಾ.
ನೆನ್ನೆಗಮಿಂತಿರ್ಪೆನೆಂದು
ತನ್ನೊಳು ತಾನೆ ತವಕಗೊಂಬ ಸತಿಯ ಮ
ಹೋನ್ನತಿಗಿನ್ನೆಣೆಯುಂಟೆ ೨೧

ನಿಟ್ಟುಸಿರಿನಿಂದ ತನ್ನ ಗೆಳತಿಯನ್ನು ಸಂತಾಪಗೊಳಿಸುವಳು. ೧೮. ಮುಖದ ಮೇಲೆ ಕವಿದು ಬೀಳುವ ಮುಂಗುರುಗಳು ಬಿಚ್ಚಿಹೋದ ತುರುಬು, ರೆಪ್ಪೆಬಡಿಯದ ಚಿಗುರು ಕ'ಗಳು, ಮುಗಿಯದಿರುವ ಚಿಂತೆ- ಇವುಗಳಿಂದ ತನ್ನ ಗೆಳತಿಗೆ ಸಂಕಟವನ್ನುಂಟು ಮಾಡುವಳು. ೧೯. ಮುಖದ ಎದುರಿಗೆ ಮುಖತಂದು ಬಾಯ್ಬಿಟ್ಟು ಕೂಗಿದರೂ, ದೇಹವನ್ನು ಅಲುಗಾಡಿಸಿ ಎಚ್ಚರಿಸಿದರೂ ಕೂಡಲೆ ಎಚ್ಚರಗೊಳ್ಳದೆ ವಿರಹಿಣಿಯ ಉಪಾಯದಿಂದ ಸ್ನೇಹಿತೆಯರ ಸಮೂಹವನ್ನು ದೂರಮಾಡುವಳು. ೨೦. 'ಅಕ್ಕ, ಏಕೆ ಹೀಗೆ ಚಿಂತಿಸುತ್ತಿದ್ದೀಯೆ' ಎಂಬ ಮಾತು ಕಿವಿಗೆ ಬಿದ್ದೊಡನೆಯೇ, ಕೋಪತಾಳುತ್ತ ಅಕ್ಕ ಪಕ್ಕದಲ್ಲಿ ನಿಂತವರ ಮೇಳೆ ಅಸಮಾಧಾನಪಡುತ್ತ ಸ್ನೇಹಿತರಿಗೆ ದಿಗ್ಭ್ರಮೆ ಹುಟ್ಟಿಸುವಳು. ೨೧. ನನ್ನ ಗಂಡನ ಪಾದಸೇವೆಯಲ್ಲದೆ ನಾನು ಎಲ್ಲಿಯವರೆಗೆ ಹೀಗಿರಲಿ - ಎಂದು ತನ್ನೊಳಗೆ ತಾನೆ ಆತಂಕಗೊಳ್ಳುವ ಪತಿವ್ರತೆಯ ಔನ್ನತ್ಯಕ್ಕೆ ಸಮವುಂಟೆ ?

ಒಲಿದ ನಲ್ಲನ ವಿರಹದೊಳೊರಲುವ ಕುಲ
ಲಲನೆಯ ವಿರಹವೇದನೆಗೆ
ಪಲಬಗೆಯುಗ್ರತಪಂಗಳೀಡಲ್ಲೆಂ
ದುಲಿವುವು ಮುನ್ನಿನೋದುಗಳು ೨೨

ಇರದೆಸಗುವ ದಾನ ಹೋಮ ನಿಯಮದಿಂದ
ಪರಿಹರಿಸದ ಪಾಪಗಳು
ವಿರಹದ ತನಿಬೆಂಕಿಯಿಂದ ಬೆಂದಳಿವುದೆಂ
ದೊರೆವರಖಿಲವೇದವಿದರು ೨೩

ಈ ದೇಹದಂಡನವೈಸೆ ಪ್ರಾಯಶ್ಚಿತ್ತ
ವೇದವಿಹಿತ ಮಾರ್ಗದೊಳು
ಆ ದಾರಿಯೊಳಾಣ್ಮನಗಲೆ ಸಂಕಟಗೊಂಬ
ವೇದನೆಗೆಣೆಯಾವುದಿನ್ನು ೨೪

ಬಸವಳಿದೊಡಲ ಪಾಸಿನೊಳೀಡಾಡುವ
ಳುಸುರುಸುರೆಂದೊರಲುವಳು
ಮುಸುಕಿಡುವಳು ಮುದುಡುವಳು ಕೈಕಾಲ್ಗಳ
ಬಿಸುಸುಯ್ದು ಬೆಚ್ಚುತೇಳುವಳು ೨೫

ಅರಿಯದೆ [೧]ತನಿಗೆಂಡ[೧]ವ ಮೆಟ್ಟ ನಿಂದಂತೆ
ತುರುಚನ ಗಿಡು ಸೋಂಕಿದಂತೆ
ಬಿರುಬುಗೊಂಬಳು ಬೆದರುವಳಳಲುವಳು ಬೇ
ಸರುವಳು ಬೇನೆವಡೆವಳು ೨೬

೨೨. ಪ್ರೀತಿಸಿದ ಪ್ರಿಯನ ಅಗಲಿಕೆಯಿಂದ ಸಂಕಟಪಡುವ ಕುಲಸ್ತ್ರೀಯ ವಿರಹ ವೇದನೆಗೆ ನಾನಾಬಗೆಯ ಕಠಿನ ತಪಸ್ಸುಗಳೂ ಸಮವಾಗುವುದಿಲ್ಲ ಎಂದು ಹಿಂದಿನ ಶಾಸ್ತ್ರಗಳು ಹೇಳುತ್ತವೆ. ೨೩. ಬಿಡದೆ ಮಾಡುವ ದಾನ, ಹೋಮ, ನಿಯಮಗಳಿಂದ ಪರಿಹಾರವಾಗದ ಪಾಪಗಳು, ವಿರಹದ ಬೆಂಕಿಯಿಂದ ಬೆಂದು ನಾಶವಾಗುತ್ತವೆ ಎಂದು ವೇದಾದಿಗಳು ಹೇಳುತ್ತವೆ. ೨೪. 'ದೇಹದಂಡನವೇ ಪ್ರಾಯಶ್ಚಿತ್ತ' ಎಂಬುದು ವೇದಸಮ್ಮತವಾದ ಹೇಳಿಕೆ. ಅದೇ ಮಾರ್ಗದಲ್ಲಿ, ಗಂಡನನ್ನು ಅಗಲಿ ಸಂಕಟಪಡುವ ನೋವಿಗೆ ಸರಿಸಮವಾದದ್ದು ಯಾವುದಿದೆ ? ೨೫. ಆಯಾಸಪಟ್ಟ ದೇಹವನ್ನು ಹಾಸಿಗೆಯ ಮೇಲೆ ಹೊರಳಾಡಿಸುವಳು, ನಿಟ್ಟುಸಿರು ಬಿಡುವಳು, ಮುಸುಕಿಟ್ಟು ಮಲಗುವಳು, ಕೈಕಾಲುಗಳನ್ನು ಮಡಿಚಿಕೊಳ್ಳುವಳು, ಬಿಸುಸುಯ್ಯುವಳು, ಬೆಚ್ಚಿಬೀಳು ವಳು. ೨೬. ತಿಳಿಯದೆ ಕೆಂಡವನ್ನು ಮೆಟ್ಟಿ ನಿಂತವಳಂತೆ, ತುರುಚುಗಿಡವನ್ನು

---

೧. (ಖ) ತರಿಗೆಂಡ

ಒಂದರೆಗಳಿಗೆಯನೊಂದು ಬರಿಸದಂ
ತೊಂದು ಜಾವವ ಯುಗದಂತೆ
ಒಂದಿರುಳನು ಕಲ್ಪಕಾಲದಂತೆಣಿಪಳು
ಮಂದುಗೆಡುವಳು ಮೋಹಿಪಳು ೨೭

ಬನದೊಳು ದೆಸೆಗೆಟ್ಟು ಪರಿವಂತೆ [೧]ಕತ್ತಲೆ[೧]
ಮನೆಯೊಳು ಕಣ್ದೆರೆವಂತೆ
ಇನಿಯನನಗಲಿ ತಾನಿರವುಗಾಣದೆ ಮಿಗೆ
ಯನುಗೆಡುತಳವುಗುಂದುವಳು ೨೮

ಎಂದಿಗೆನ್ನಿನಿಯನನಿದಿರುಗೊಳುವೆನಿ
ನ್ನೆಂದಿಗೆ ಹತ್ತೆ ಸಾರುವೆನು
ಎಂದಿಗವನ ಪಡಿಮೊಗದೊಳು ಸಂದಪೆ
ನೆಂದೆಡೆವಿಡದೆ ಜಾನಿಪಳು ೨೯

ಎಂದಿಗವನ ನುಡಿಗಳ ಸವಿಸವಿದಾ
ನಂದದೊಳಳ್ದು ತೇಲುವೆನು
ಎಂದಿಗೆನ್ನಿರವನವನಿಗಾನರುಹುವೆ
ನೆಂದು ಬಯಸಿ ಬಳಲುವಳು ೩೦

ಮುಟ್ಟಿದವಳಂತೆ ಒರಟಾಗುತ್ತಾಳೆ, ಬೆದರುತ್ತಾಳೆ, ಅಳುತ್ತಾಳೆ, ಬೇಸರಿಸುತ್ತಾಳೆ, ಯಾತನೆಪಡುತ್ತಾಳೆ. ೨೭. ಅರ್ಧಘಳಿಗೆಯನ್ನು ಒಂದು ವರುಷದಂತೆ, ಒಂದು ಜಾವವನ್ನು ಒಂದು ಯುಗದಂತೆ, ಒಂದು ರಾತ್ರಿಯನ್ನು ಒಂದು ಕಲ್ಪದ ಅವಧಿಯಂತೆ ಭಾವಿಸುತ್ತಾಳೆ. ದಿಕ್ಕು ತೋಚದವಳಂತೆ ಭ್ರಮೆಗೊಳ್ಳುತ್ತಾಳೆ. ೨೮. ಕಾಡಿನಲ್ಲಿ ದಾರಿ ತಪ್ಪಿ ನಡೆಯುವಂತೆ, ಕತ್ತಲೆಮನೆಯಲ್ಲಿ ಕಣ್ಣು ಬಿಡುವವಳಂತೆ, ಗಂಡನನ್ನು ಅಗಲಿ ಏನು ಮಾಡಲೂ ತೋರದೆ ಕ್ರಮತಪ್ಪಿ ನಡೆಯುತ್ತ ಶಕ್ತಿಹೀನಳಾಗುತ್ತಾಳೆ. ೨೯. ಎಂದು ನನ್ನ ಪ್ರಿಯನನ್ನು ಎದುರುಗೊಳ್ಳುತ್ತೇನೆಯೋ, ಎಂದು ಅವನ ಹತ್ತಿರಕ್ಕೆ ಹೋಗು ತ್ತೇನೆಯೊ ಎಂದು ಅವನ ಮುಖದ ಮುಂದೆ ತನ್ನ ಮುಖವನ್ನು ತರುತ್ತೇನೆಯೋ ಎಂದು ಒಂದೇ ಸಮನೆ ಧ್ಯಾನಿಸುತ್ತಿರುತ್ತಾಳೆ. ೩೦. ಎಂದಿಗೆ ಅವನ ಸಕ್ಕರೆ ಮಾತುಗಳನ್ನು ಸವಿಸವಿದು ಆನಂದಸಮುದ್ರದಲ್ಲಿ ತೇಲುತ್ತೇನೆಯೋ, ಯಾವತ್ತಿಗೆ

---

೧. (ಕ) ಕಟ್ಟಿಲೆ (ಗ) ಕಳ್ತಲೆ.

ಎಂದಿಗೆನ್ನದೆ ತಣಿವಂತೆಲ್ಲ ಸೇವೆಯ
ನೊಂದನುಳಿಯದೊಡರಿಪೆನು
ಎಂದಿಗವನೊಳೊಡವೆರೆದೊಂದೆನಿಸುವೆ
ನೆಂದೆರಕದೊಳೆಣಿಸುವಳು ೩೧

ಇಂದಿನೊಳೀಗಲೆನ್ನಿನಿಯನೈತರಬೇ
ಕೆಂದು ಕದುಬಿ ಕಾತರಿಸಿ
ಮಿಂದು ಮಡಿಯನಟ್ಟು ಮನೆಯ ದೇವರ ಬಲ
ವಂದು ನೋಂಪಿಯ ನೋನುವಳು ೩೨

ಅತ್ತಣ ದೆಸೆಯಿಂದ ಬೀಸುವೆಲರನೆಲ
ರೊತ್ತಿನೊಳೆಸೆವ ಸೌಸವವ
ಸುತ್ತಿ ಸೌಸವವ ತುತ್ತುವ ತುಂಬಿಯ ಬೆಂ
ಬತ್ತಿ ಕೇಳುವಳವನಿರವ ೩೩

ಬೆಸಗೊಂಬಳಿನಿಯನಾವೆಡೆಯೊಳಿರುವನಾ
ದೆಸೆಯಿಂದ ಬಂದ ಬಂದವರ
ಬೆಸಗೊಂಬಳು ಜೋಯಿಸರ ಜೋಗಿಪುರುಷರ
ಬೆಸಗೊಂಬಳು ಬಿಜ್ಜೆವಳರ ೩೪

ನನ್ನ ಸ್ಥಿತಿಯನ್ನು ಅವನಿಗೆ ತಿಳಿಸುವೆನೋ ಎಂದು ಬಯಸಿ ಬಳಲುತ್ತಾಳೆ. ೩೧. ನನ್ನ ಹೃದಯ ತೃಪ್ತಿಯಾಗುವವರೆಗೆ ಅವನ ಸೇವೆಯನ್ನು ಯಾವುದೂ ಉಳಿಯದಂತೆ ಎಂದಿಗೆ ಮಾಡುವೆನೊ, ಅವನೊಡನೆ ಎಂದು ಬೆರೆತು ಒಂದಾಗುವೆನೊ ಎಂದು ಪ್ರೇಮತಾಪದಿಂದ ಲೆಕ್ಕಹಾಕುತ್ತಿರುತ್ತಾಳೆ. ೩೨. 'ಇಂದೇ ಇವೊತ್ತೇ ಈಗಲೇ ನನ್ನ ಗಂಡ ಬರಬೇಕು' ಎಂದು ಚಿಂತಿಸಿ ಕಾತರಗೊಂಡು ಸ್ನಾನಮಾಡಿ, ಶುಭ್ರವಸ್ತ್ರ ತೊಟ್ಟು ಮನೆದೇವರಿಗೆ ಪ್ರದಕ್ಷಿಣೆ ಹಾಕಿ ವ್ರತವನ್ನು ಕೈಕೊಂಡು ಹರಕೆಹೊರುವಳು. ೩೩. ಆ ದಿಕ್ಕಿನಿಂದ ಬೀಸುವ ಗಾಳಿಯನ್ನು, ಗಾಳಿಯಲ್ಲಿ ಒತ್ತಿಬರುವ ಸುವಾಸನೆಯನ್ನು, ಸುವಾಸನೆಯನ್ನು ಅಂಟಿಕೊಂಡು ಬರುವ ದುಂಬಿಯನ್ನು ಕುರಿತು ತನ್ನ ಗಂಡನ ಸ್ಥಿತಿಯನ್ನು ಕೇಳುವಳು. ೩೪. ಗಂಡ ಇರುವ ದಿಕ್ಕಿನಿಂದ ಬಂದಬಂದವರನ್ನೆಲ್ಲ ಗಂಡನ ವಿಚಾರವನ್ನು ಕೇಳಿವಳು. ಜೋಯಿಸರನ್ನು, ಯೋಗಿಪುರುಷರನ್ನು, ವಿದ್ಯಾವಂತರನ್ನು

ಬೆಸಗೊಂಬಳೆನ್ನ ವಲ್ಲಭನೆಲ್ಲಿದನೆಂದು
ಬೆಸಗೊಂಬಳೆಂತಿರ್ಪನೆಂದು
ಬೆಸಗೊಂಬಳೆಂದಿಗೆ ಬಂದಪನೆಂದಿಂತು
ಬೆಸಗೊಂಬಳು ಬೇಸರದೆ ೩೫

ಇಂದಿಗೀ ಪಗಲಿಗೀ ಜಾವಕೀ ಘಳಿಗೆಗೆ
ಬಂದಪನೆಂದವರುಸಿರೆ
ಮಂದಹಸಿತ ಮುಖದಿಂದ ಮನದೊಳಾ
ನಂದದಿ ನಲವೇರುವಳು ೩೬

ಉಕ್ಕಿ ಸುರಿವ ಸೊಗದಾಲಿ ನೀರ್ವೊನಲಿಂದ
ಮಿಕ್ಕು ಮೀರುವ 'ನವಿರಿ'ಂದ
ಸೊಕ್ಕುವ ಮನದಿಂದ ಸುತ್ತುಗೆಳದಿಯರ
ಚೆಕ್ಕಸಬೆರಗುವಡಿಪಳು ೩೭

ಈಗಲೆ ಬರ್ಪನೆಂಬುದನಾಲಿಸಿ ತಲೆ
ವಾಗಿಲ ತೆರೆಯಲೆಳಸುತ
ಬೇಗದೊಳವನ ಸೇವೆಗೆ ಬೇಕಾದುದ
ನಾಗಳೆಯನುಗೊಳಿಸುವಳು ೩೮

ಪ್ರಶ್ನೆ ಕೇಳುವಳು, 'ತನ್ನ ನಲ್ಲ ಯಾವಾಗ ಬರುತ್ತಾನೆ' ಎಂದು. ೩೫. ಅಗಲಿಕೆಯ ಬೇಸರದಿಂದ ಒಂದು ರೀತಿಯ ಮತಿಭ್ರಮಣೆಯಿಂದಲೋ ಎಂಬಂತೆ 'ನನ್ನ ಗಂಡ ಎಲ್ಲಿ ? ನನ್ನ ಪತಿ ಹೇಗಿದ್ದಾನೆ ? ನನ್ನ ಒಡೆಯ ಎಂದು ಬರುತ್ತಾನೆ ?' ಎಂದು ಸುಮ್ಮನೆ ಕೇಳುತ್ತಿರುತ್ತಾಳೆ. ೩೬. "ಈಗಲೇ ಬರುತ್ತಾನೆ. ಈ ಹಗಲಿನಲ್ಲೇ ಬರುತ್ತಾನೆ. ಈ ಜಾವಕ್ಕೆ ಈ ಘಳಿಗೆಗೆ ಬರುತ್ತಾನೆ" ಎಂದು ಯಾರಾದರೂ ಹೇಳಿದರೆ ಸಾಕು, ಮಂದ ಹಾಸದಿಂದ ಮನಸ್ಸಿನಲ್ಲಿ ಆನಂದತುಂದಿಲಳಾಗುವಳು. ೩೭. ಆ ಮಾತು ಕೇಳಿದರೆ ಸುಖ ಉಕ್ಕಿ ಹರಿಯುತ್ತದೆ, ಕಣ್ಣು ಆನಂದಬಾಷ್ಪ ಸುರಿಯುತ್ತದೆ, ರೋಮಾಂಚನ ಗೊಳ್ಳುತ್ತಾಳೆ, ಮನಸ್ಸು ಸೊಕ್ಕಿ ಸುತ್ತಲಿನ ಗೆಳತಿಯರನ್ನು ಆಶ್ಚರ್ಯದಿಂದ ನೋಡುತ್ತಾ ಅವನ್ನು ಬೆರಗುಗೊಳಿಸುವಳು. ೩೮. ಈಗಲೇ ಬರುತ್ತಾನೆ - ಎಂಬ ಸುದ್ದಿ ಕೇಳಿ ಹೊರ ಬಾಗಿಲ ತೆರೆಯನ್ನು ಸರಿಸಿ, ತತ್‌ಕ್ಷಣವೇ ಅವನ ಸೇವೆಗೆ ಬೇಕಾದ ಸಾಮಗ್ರಿಗಳನ್ನು

೩. (ಗ) ಸರದಿ.

ಮೊದಲೊಳು ಮುಂದುವರಿವ ನೋಟದಿಂದೊಡ
ನೊದಗುವ ಹರ್ಷಾಶ್ರುವಿಂದ
ಮುದದೊಳು ಮುರಿದೇಳುವ ನವಿರಿಂದೊಡ
ನವಿರುಗೊಳುವಳಿನಿಯನನು ೩೯

ಬಾಗಿಲ ಬಳಿಗೆ ಬಂದಪನೆಂಬುದುಮನು
ರಾಗರಸದ ಲಹರಿಯೊಳು
ಏಗೈವೆನೆಂಬುದನರಿಯದವನಿಗಿದಿ
ರಾಗಿ ನಿಟ್ಟಿಸಿ ನಿಂದಿಹಳು ೪೦

ಪುಟ್ಟಿದಂದಿಂದ ಪುರುಳುಗಾಣದವರು
ನೆಟ್ಟನೆ ನಿಧಿಯ ಕಂಡಂತೆ
ಕಟ್ಟೆರಕದೊಳಿನಿಯನ ಕಾಣುತ ಮರ
ವಟ್ಟು ಮೈಮರೆತು ನಿಟ್ಟಿಪಳು ೪೧

ಯೋಗದಶಾ ಪರಿಣತಿಯೊಳು ತನಗಿದಿ
ರಾಗಿ ನಿಂದಿರ್ದ ದೇವತೆಯ
ಯೋಗಿಗಳಿರ್ದೆಗೊಳಿಪಂತಿನಿಯನೊಳನು
ರಾಗವೆರಸಿ ನಿಟ್ಟಿಪಳು ೪೨

ಅನುಗೊಳಿಸುವಳು. ೩೯. ದೇಹಕ್ಕಿಂತ ಮೊದಲು ನೋಟದಿಂದ, ನೋಟದೊಡನೆ ಕೂಡಿಬರುವ ಆನಂದಬಾಷ್ಪದಿಂದ, ಆನಂದದಿಂದ ಉಂಟಾಗುವ ರೋಮಾಂಚನದಿಂದ ಇನಿಯನನ್ನು ಎದುರುಗೊಳ್ಳಲು ಸಿದ್ಧಳಾಗುವಳು. ೪೦. 'ಬಾಗಿಲ ಹತ್ತಿರಕ್ಕೆ ಬಂದ' ಎಂದ ಕೂಡಲೆ ಪ್ರೇಮರಸದ ಪ್ರವಾಸದಲ್ಲಿ ಏನು ಮಾಡುತಿದ್ದೇನೆ ಎಂಬುದನ್ನೂ ಮನಗಾಣದೆ ಅವನ ಎದುರಿಗೇ ನಿಂತು ದೃಷ್ಟಿಸಿ ನೋಡುವಳು. ೪೧. ಹುಟ್ಟಿದಾಗಲಿಂದ ಹಣವನ್ನೇ ಕಾಣದವರು ಇದ್ದಕ್ಕಿದ್ದಂತೆ ನಿಧಿಯನ್ನು ಕಂಡರೆ ಹೇಗೋ ಹಾಗೆ ತನ್ನ ಸಮೀಪದಲ್ಲಿಯೇ ಇರುವ ಒಡೆಯನನ್ನು ಕಂಡು ನಿಶ್ಚೇಷ್ಟಿತಳಾಗಿ, ಮೈಮೇಲೆ ಅರಿವಿಲ್ಲದೆ ದೃಷ್ಟಿಸಿ ನೋಡುತ್ತ ನಿಂತುಬಿಡುವಳು. ೪೨. ಯೋಗಿಗಳು ತಮ್ಮ ಯೋಗದ ಫಲವಾಗಿ ಎದುರಿಗೆ ನಿಂತ ತಮ್ಮ ಆರಾಧ್ಯದೈವವನ್ನು ಹೇಗೆ ತಮ್ಮ ಹೃದಯದಲ್ಲಿ ಅಡಗಿಸಿಟ್ಟುಕೊಳ್ಳುವರೋ ಹಾಗೆ ಗಂಡನನ್ನು ಅನುರಾಗದಿಂದ ದೃಷ್ಟಿಸಿ

ಕಾಣದೆ ಪಲವಗಲಿಂದ ಕಣ್ಮರೆಯಾದ
ಮಾಣಿಕ ಮೈದೋರಿದಂತೆ
ಪ್ರಾಣವಲ್ಲಭನ ಪಾದಾರವಿಂದಂಗಳ
ಕಾಣುತ ಕವಿದು ನಿಟ್ಟಿಪಳು ೪೩

ಪುಳಕದ ನೆವದಿಂದ ಪೊಣ್ಮುವ ಹರ್ಷದ
ಬೆಳಗೈಗೆ ನೀರೆರೆವಂತೆ
ತುಳುಕುವ ಸೊಗದಾಲಿ ನೀರ್ದೊರೆಯನು ತಂ
ದಿಳುಪುತವನ ನಿಟ್ಟಿಪಳು ೪೪

ಬಳಿಕ ಮನವ ಬಲಿವಿಡಿದಿನಿಯನ ಪಾದ
ನಳಿನಂಗಳಿಗೆ ನತಿಗೈದು
ಘಳಿಲನುಗುವ ಹರ್ಷಾಶ್ರುವಿಂದುಂಗುಟ
ಗಳನು ತೊಳೆದು "ಪೂಜುವಳು" ೪೫

ಕೆಲದೊಳಿರ್ಪಳು ಗೆಲ್ಲಗೊಂಬಳು ನೇಹವ
ಬಲಿವಳು ಬಣ್ಣವೇರುವಳು
ಒಲಿದು ನಿಟ್ಟಿಪಳೊಡನೊಡಲು ಮರೆತು ನಲಿ
ನಲಿವಳು ನಲವೇರುವಳು ೪೬

ನೋಡುವಳು. ೪೩. ಅನೇಕ ದಿನಗಳಿಂದ ಕಣ್ಣಿಗೆ ಕಾಣಿಸದೆ ಮರೆಯಾದ ಮಾಣಿಕ್ಯ ಎದುರಿಗೇ ಕಂಡಂತೆ ಪ್ರಾಣಪ್ರಿಯನ ಪಾದ ಕಮಲಗಳನ್ನು ಕಾಣುತ್ತ ಉತ್ಸಾಹದಿಂದ ದೃಷ್ಟಿಸಿ ನೋಡುವಳು. ೪೪. ರೋಮಾಂಚನದಿಂದ ಹೊಮ್ಮುವ ಹರ್ಷದ ಬೆಳೆಗೆ ನೀರು ಹೊಯ್ಯುವಂತೆ ತುಂಬಿತುಳುಕುವ ಸುಖದ ಕಣ್ಣೀರನ್ನು ಸುರಿಸುತ್ತ ಪತಿಯನ್ನು ದೃಷ್ಟಿಸಿ ನೋಡುವಳು. ೪೫. ಅನಂತರ ಮನಸ್ಸನ್ನು ದೃಢಪಡಿಸಿ ಕೊಂಡು ಪ್ರಿಯನ ಪಾದಪದ್ಮಗಳಿಗೆ ನಮಸ್ಕಾರಮಾಡಿ, ತತ್‌ಕ್ಷಣದಲ್ಲಿ ಚಿಮ್ಮುವ ಹರ್ಷಬಾಷ್ಪಗಳಿಂದ ಅವನ ಅಂಗುಷ್ಠಗಳನ್ನು ತೊಳೆದು ಪೂಜಿಸುವಳು. ೪೬. ಅವನ ಪಕ್ಕದಲ್ಲಿ ನಿಂತು, ಜಯ ದೊರಕಿದವಳಂತೆ ಸ್ನೇಹವನ್ನು ಬೀರುವಳು ; ಕಾಂತಿಯುಕ್ತ ಳಾಗುವಳು ; ದೇಹದ ಮೇಲೆ ಪರಿವೆಯಿಲ್ಲದೆ ಪ್ರೀತಿಯಿಂದ ದೃಷ್ಟಿಸಿ ನೋಡುವಳು,

---

೪. (ಗ) ಪೂಜಿಪಳು.

ಪೊರಮಟ್ಟು ಪೋದಂದು ಮೊದಲಿಂದುವರೆಗೆ ತ
ನ್ನೆರೆಯನಿರ್ದಿರವೆಲ್ಲವನು
ಎರಕವೆರಸಿ ಕೇಳುವಳೆಡೆಯೊಳು
ಮರುಗುತ ಮನಗೊಳಿಸುವಳು ೪೭

ಎರವಿನಿತಿಲ್ಲದೆಂದಿನ ನೇಹದೊಳೊಡ
ವೆರಸುವಳೆಂದೆರಗುವಳು
ಪರಿಪರಿಯೂಳಿಗವನು ಪಣ್ಣಿ ತಣಿವಳು
ಪರಮಾನಂದವಡುವಳು ೪೮

ಜಾನಿಸುತಿನಿಯನ ಚರಿತವ ವಿರಹದೊ
ಳೀ ನೇಮವ ನೆಲೆಗೊಂಡ
ಮಾನಿನಿಗಿಹಪರದೊಳು ಮನದೊಲವರಿ
ತಾನಂದವೀವನಚ್ಯುತನು ೪೯

ಚೆನ್ನಿಗ ಚಿಕದೇವರರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಮನ್ನಣೆವಡೆದೊಪ್ಪಿದುದೇಳನೆಯ ಸಂಧಿ
ಸನ್ನುತ ಗುಣಸಂಬಂಧಿ ೫೦

ಹರ್ಷಗೊಳ್ಳುವಳು, ಆನಂದದಿಂದ ಉಬ್ಬುವಳು. ೪೭. ಇಲ್ಲಿಂದ ಹೊರಟಾಗಲಿಂದ ಇದುವರೆಗೆ ತನ್ನ ಪತಿಯ ಸ್ಥಿತಿಯನ್ನು ಕುರಿತು ಪ್ರೀತಿಯಿಂದ ಕೇಳುವಳು. ಅವನು ಹೇಳುವಾಗ ಮಧ್ಯದಲ್ಲಿ ಮರುಕಪಡುತ್ತ ಅವನೊಡನೆ ಸಹಾನುಭೂತಿ ತೋರಿಸುತ್ತ ಅವನ ಮನಸ್ಸಿಗೆ ತೃಪ್ತಿಯಾಗುವಂತೆ ನಡೆದುಕೊಳ್ಳುವಳು. ೪೮. ಯಾವ ಭೇದವೂ ಇರದೆ ಹಿಂದಿನ ಪ್ರೇಮದಿಂದಲೇ ಜೊತೆಗೂಡುವಳು, ಅವನಿಗಾಗಿ ಕರಗುವಳು. ವಿವಿಧ ರೀತಿಯ ಸೇವೆಯನ್ನು ಮಾಡಿ ತಾನು ತೃಪ್ತಿಪಡು ವಳು. ಆನಂದಪಡುವಳು. ೪೯. ವಿರಹಕಾಲದಲ್ಲಿ ಇನಿಯನ ಚರಿತ್ರೆಯನ್ನು ಧ್ಯಾನಿಸುತ್ತ ನಿಯಮಯುಕ್ತಳಾಗಿ ನಡೆದುಕೊಂಡ ಮಾನಿನಿಗೆ ಇಹಪರಗಳೆರಡಲ್ಲೂ ಭಗವಂತನು ಮನಃಪೂರ್ತಿಯಾಗಿ ಆನಂದವನ್ನು ಕರುಣಿಸುವನು. ೫೦. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ ರಚಿಸಿದ ಕಾವ್ಯದಲ್ಲಿ ಖ್ಯಾತಿಪಡೆದ ಗುಣಯುಕ್ತವಾದ ಏಳನೆಯ ಸಂಧಿ ಉನ್ನತ ರೀತಿಯಲ್ಲಿ ಸಮಾಪ್ತವಾಯಿತು.

# ಎಂಟನೆಯ ಸಂಧಿ

ಆವನಿಚ್ಛೆಯೊಳವತರಿಸಿದುದಾದಿಯೊ
ಳಾವನಿಂದೊಳ್ಪುವಡೆದುದು
ಆವನೊಳಡಗುವುವಖಿಳ ಚರಾಚರ
ವಾ ವಿಷ್ಣುಗಾನೆರಗುವನು ೧

ಶ್ರೀ ವಿಷ್ಣುವಲ್ಲಭೆಯೆನಿಸಿ ಸಕಲ ವೇ
ದಾವಳಿಯೊಳು ಜಸವಡೆದ
ಪಾವನಚರಿತೆಯ ಪದ್ಮಸದ್ಮೆಯ ಲ
ಕ್ಷ್ಮೀವನಿತೆಯ ವಂದಿಪೆನು ೨

ಲೋಕಶಾಸ್ತ್ರವನಾಲೋಚಿಸಿ ತಿಳಿದದ
ರೈಕಮತ್ಯವನಳವಡಿಸಿ
ಏಕಪತ್ನಿಯರೆಸಗುವ ದಿನಚರ್ಯೆಯ
ಜೋಕೆತಪ್ಪದೆ ಸೊಲ್ಲಿಸುವೆನು ೩

ಅರುಣೋದಯದ ಸಮಯದೊಳೆದ್ದು ಶ್ರೀಹರಿ
ಗುರುಚರಣಕೆ ಕೂರ್ತೆರಗಿ
ಪರಮಭಕ್ತಿಯೊ[೧]ಳೊಲಿದಿನಿಯನೆಚ್ಚರುವನ್ನ
ಮರುಕವೆರೆದು ಕಾದಿಹುದು[೧] ೪

೧. ಸಮಸ್ತ ಚರಾಚರಗಳು ಮೊದಲು ಯಾವನ ಅಪೇಕ್ಷೆಯಿಂದ ಅವತಾರ ಗೊಂಡವೋ, ಯಾವನಿಂದ ಅಭಿವೃದ್ಧಿಗೊಂಡವೋ, ಯಾವನಲ್ಲಿ ಅಡಗುವುವೋ ಆ ವಿಷ್ಣುವಿಗೆ ನಾನು ನಮಸ್ಕರಿಸುತ್ತೇನೆ. ೨. ಶ್ರೀ ವಿಷ್ಣುವಿನ ಸತಿ ಎನ್ನಿಸಿಕೊಂಡು, ಸಮಸ್ತ ವೇದಗಳಿಂದ ಕೀರ್ತಿಪಡೆದ, ಪಾವನಚರಿತ್ರಳಾದ ಕಮಲಗೃಹವಾಸಿನಿಯಾದ ಲಕ್ಷ್ಮಿಯನ್ನು ನಮಸ್ಕರಿಸುತ್ತೇನೆ. ೩. ಲೋಕಶಾಸ್ತ್ರವನ್ನು ಚಿಂತಿಸಿ ತಿಳಿದು, ಅದರ ಭಾವನೆಗಳನ್ನು ಒಂದುಗೂಡಿಸಿ ಪತಿವ್ರತೆಯರು ನಡೆದುಕೊಳ್ಳುವ ದಿನಚರಿಯನ್ನು ತುಂಬ ಎಚ್ಚರದಿಂದ ಹೇಳುತ್ತೇನೆ. ೪. ಸೂರ್ಯ ಹುಟ್ಟುವುದಕ್ಕೆ ಮುಂಚೆ ಎದ್ದು ಶ್ರೀಹರಿಗೆ ಗುರುವಿಗೆ ಭಕ್ತಿಯಿಂದ ನಮಸ್ಕಾರ ಮಾಡಿ, ಪತಿಯು ಎಚ್ಚರಗೊಳ್ಳುವವರೆಗೆ ಅದೇ

---

೧. (ಖ) ಳಾತ್ಮಪತಿಯ ಪಾದವ ತನ್ನ ಶಿರದೊಳು ಶೇಖರಿಸುವುದು.

ಸಡಿಲಿದ ಮುಡಿಯ ಸೈಪಿಡುತೊಂದರೊಳೊಂದು
ತೊಡಕಿದ ರನ್ನ ಸರಗಳ
ಬಿಡಿಸುತೆಚ್ಚರುವನ್ನೆವರಮಿನಿಯನ ಕೆಲ
ಗಡೆಯೊಳೊಲಿದು ಕಾದಿಹುದು ೫

ಎದ್ದು ನಿಟ್ಟಿಸುವಿನಿಯನ ನೋಟಕೆ ತನ್ನ
ಮುದ್ದುಮೊಗವ ಮುಂಗೊಳಿಸಿ
ನಿದ್ದೆಯೊಳೆಸಗಿದ ನಿಖಿಲಾಪಚಾರವ
ತಿದ್ದುವುದಿನಿವಾತಿನೊಳು ೬

ಅಡಿಗಳಿಗೆರಗಿಯಾಣತಿಗೊಂಡು ಪೊಡಮ
ಟ್ಟೊಡನೂಳಿಗದ ಪೆಣ್ಗಳಿಗೆ
ಬಿಡುಗೆಲಸಂಗಳ ಬೆಸಸಿ [1]ಯಾಪಂ[1]ತೆ ತಾ
ನೊಡರಿಪುದೊಳ್ಗಜ್ಜವನು ೭

ಕರುತುರುಗಳ ಕಾಪಿಡುವ ಕರೆವ ಪಾ
ಲ್ಗರೆವ ಕಾಸುವ ಕೌಶಲವ
ಅರಿಯದ ಸೊಸೆ ಪೆಣ್ಮಕ್ಕಳಿಗಾ ಬಗೆ
ಯರಿವಂತನುಗೊಳಿಸುವುದು ೮

ಶ್ರದ್ಧಾಭಕ್ತಿಗಳಿಂದ ತವಕದಿಂದ ಕಾದಿರಬೇಕು. ೫. ಸಡಿಲಗೊಂಡ ತುರುಬನ್ನು ಸರಿಪಡಿಸಿಕೊಂಡು, ಒಂದರಲ್ಲೊಂದು ಸಿಕ್ಕಿಹಾಕಿಕೊಂಡ ರತ್ನಹಾರದ ಎಳೆಗಳನ್ನು ಬಿಡಿಸಿಕೊಂಡು ಪ್ರಿಯನು ಎಚ್ಚರಗೊಳ್ಳುವವರೆಗೆ ಅವನ ಸಮೀಪದಲ್ಲಿಯೇ ಪ್ರೀತಿಯಿಂದ ಕಾದಿರಬೇಕು. ೬. ಎಚ್ಚರಗೊಂಡು ನೋಡುವ ಪ್ರಿಯನ ದೃಷ್ಟಿಗೆ ತನ್ನ ಮುಖವನ್ನು ಮುಂದುಮಾಡಿ, ನಿದ್ರೆಯಲ್ಲಿ ಮಾಡಿದ ಅಪಚಾರವನ್ನು ಸವಿಮಾತುಗಳಿಂದ ಸರಿಪಡಿಸಿಕೊಳ್ಳಬೇಕು. ೭. ಅವನ ಪಾದಗಳಿಗೆ ನಮಸ್ಕಾರಮಾಡಿ, ಅವನ ಅಪ್ಪಣೆ ಪಡೆದು ಹೊರಟು ಕೆಲಸದ ಹೆಣ್ಣಾಳುಗಳಿಗೆ ಬೇರೆ ಬೇರೆ ಕೆಲಸಗಳನ್ನು ಹೇಳಿ ಅದಾದ ನಂತರ ತನ್ನ ಕಾರ್ಯಗಳಲ್ಲಿ ತೊಡಗಬೇಕು. ೮. ಹಸುಕರುಗಳನ್ನು ರಕ್ಷಿಸುವ, ಹಾಲು ಕರೆಯುವ, ಕಾಸುವ ಕೌಶಲವನ್ನು ತಿಳಿಯದ ಹೆಣ್ಣುಮಕ್ಕಳಿಗೆ, ಸೊಸೆಯಂದಿರಿಗೆ ಕಲಿಸಲು

---

೧. (ಗ) ಯಪ್ಪಂ.

ದೇವಪೂಜೆಯ ದೇವರಿಗೆರಗುವುದೆತ್ತ
ಮಾವಂದಿರಡಿಗೆ ಮಣಿವುದು
ಭಾವಂದಿರಡಿಗೆ ವಂದನೆಗೈವುದು ತನ್ನ
ಭಾವಶುದ್ಧಿಯ ಬಳೆಯಿಪುದು ೯

ಮನಮೊಲಿದುಡಿಸಿ ತಿಲಕಂಗಳ
ನನುಗೈದಾದರವೆರಸಿ
ಮನೆಯೊಳಿರುವ ಮಕ್ಕಳನೆಲ್ಲರನೊ
ಯ್ದನಿಬರಡಿಯೊಳೆರಗಿಪುದು ೧೦

ಕಳವು ಕಪಟಗಳ ಕಲಿಯದಂದದಿ ಮ
ಕ್ಕಳನಡಿಗಡಿಗಳುಕಿಪುದು
ಎಳಮೆಯೊಳೆದೆಗೊಂಡು ಸುಗುಣ ದುರ್ಗುಣಗಳ
ಕಳೆವುದರಿದು ಕಡೆಕಡೆಗೆ ೧೧

ಆರೈದು ತನ್ನಿನಿಯನ ಸಿರಿ ಬಡತನ
ವೀ ರೀತಿಯೆಂದೆದೆಗೊಳಿಸಿ
ಬಾರದ ವಸ್ತುವ ಬಯಸಿ ಬಾಧಿಸದೆ ಕೈ
ಸಾರಿದುದಕೆ ಸಮ್ಮತಿಪುದು ೧೨

ಸಹಾಯ ಮಾಡಬೇಕು. ೯. ಪೂಜೆ ಮಾಡುವ ದೇವರಿಗೆ ನಮಸ್ಕಾರ ಮಾಡಿ, ಅತ್ತೆಮಾವಂದಿರ ಭಾವಂದಿರ ಪಾದಗಳಿಗೆ ಮಣಿದು ತನ್ನ ಭಾವವನ್ನು ಶುದ್ಧಗೊಳಿಸಿ ಕೊಳ್ಳಬೇಕು. ೧೦. ಮನಃಪ್ರೀತಿಯಿಂದ ಮನೆಮಕ್ಕಳೆಲ್ಲರಿಗೆ ಬಟ್ಟೆಗಳನ್ನು ಉಡಿಸಿ, ತೊಡಿಸಿ, ಹಣೆಗೆ ತಿಲಕಾದಿಗಳನ್ನಿಟ್ಟು ಆದರದಿಂದ ಹಿರಿಯರಿಗೆ ನಮಸ್ಕಾರ ಮಾಡುವಂತೆ ಹೇಳಬೇಕು. ೧೧. ಮಕ್ಕಳು ಕಳ್ಳತನ, ಮೋಸ, ವಂಚನೆಗಳನ್ನು ಕಲಿಯದಂತೆ ಅವರನ್ನು ಕಾಲಕಾಲಕ್ಕೆ ಗದರಿಸಿ ಸರಿಯಾಗಿರುವಂತೆ ಕಲಿಸಬೇಕು. ಏಕೆಂದರೆ, ಬಾಲ್ಯದಲ್ಲಿ ಹೃದ್ಗತವಾದ ಸುಗುಣ ದುರ್ಗುಣಗಳನ್ನು ಕಡೆಗೆ ಕಳೆಯುವುದು ಕಷ್ಟ. ೧೨. ತನ್ನ ಗಂಡನ ಸಿರಿತನ ಬಡತನಗಳು ಈ ರೀತಿಯದೆಂದು ತಿಳಿದು ಅದನ್ನು ಮನಸ್ಸಿಗೆ ತಟ್ಟುವಂತೆ ತಿಳಿಸಿ, ಎಟುಕಲಾರದ ವಸ್ತುವನ್ನು ಬಯಸಿ ನಿರಾಸೆಗೊಳ್ಳದೆ, ತೊಂದರೆಗೊಳ್ಳದೆ ತನಗೆ ಲಭಿಸಿದಷ್ಟಕ್ಕೆ ಸಂತೋಷಪಡಬೇಕು.

ಹಸಗೆಡದಂತೆ ಹಕ್ಕಿಗಳು ಕುಟುಕದಂತೆ
ಪಸುಗಳು ಬಾಯಿಡದಂತೆ
ಕಸ ಪುಗದಂತೆ ಕಾಪಿಡುವುದು ಧಾನ್ಯವ
ಜಸವಡೆವುದು ಜಾಣ್ಮೆಯೊಳು ೧೩

ಸಾವಧಾನದೊಳು ಸಂಪಾದಿಸಿ ಮನೆಯೊಳು
ತೀವಿದ ದಿವ್ಯವಸ್ತುಗಳ
ದೇವರಾರೋಗಣೆಗೆಂದೆಲ್ಲವ ಭಕ್ತಿ
ಭಾವದಿ ಪರಿಶೋಧಿಪುದು ೧೪

ಪಳದಾಗದ ಮುನ್ನ ಬಣ್ಣಗೆಡದ ಮುನ್ನ
ಮೊಳೆದೋರಿ ಮುಗ್ಗದ ಮುನ್ನ
ಕಳೆಯಳಿಯದ ಮುನ್ನ ಕುಂದಿ ಕುಂದದ ಮುನ್ನ
ಬಳಸುವುದಖಿಳ ವಸ್ತುವನು ೧೫

ಮೀಸಲಳಿಯದಂತೆ ಮಿದಿವರೆವುದರ್ಚುವ
ಬೀಸುವರನು ಬೆಸಸುವುದು
ಈ ಸುವಸ್ತುವನಿಂತನುಗೊಳಿಸುವ ಬಗೆ
ಲೇಸೆಂಬವೊಲೆಸಗುವುದು ೧೬

೧೩. ಅಶುದ್ಧವಾಗದಂತೆ, ಹಕ್ಕಿಗಳು ಕುಟುಕದಂತೆ ಹಸುಗಳು ಬಾಯಿಹಾಕದಂತೆ ಕೊಳೆ ಸೇರದಂತೆ ಧಾನ್ಯವನ್ನು ಜಾಣತನದಿಂದ ರಕ್ಷಿಸಿಡಬೇಕು. ೧೪. ಮನೆಯಲ್ಲಿ ಶೇಖರಿಸಿದ ದವಸಧಾನ್ಯಗಳನ್ನು ಅಚ್ಚುಕಟ್ಟಾಗಿ ಜೋಡಿಸಿ ತೆಗೆದಿಟ್ಟು ಎಲ್ಲವೂ ದೇವರ ನೈವೇದ್ಯಕ್ಕೆ ಎಂಬ ಭಕ್ತಿಭಾವದಿಂದ ಅವುಗಳನ್ನು ಸ್ವಚ್ಛಗೊಳಿಸುವುದು ಕ್ರಮ. ೧೫. ಮನೆಯಲ್ಲಿರುವ ಪದಾರ್ಥಗಳನ್ನು ಅವು ಹಳತಾಗುವುದಕ್ಕೆ ಮುಂಚೆ, ಮಾಸಿಹೋಗುವುದಕ್ಕೆ ಮೊದಲು, ಮೊಳಕೆ ಒಡೆಯಲು ಬಿಡದೆ, ಮುಗ್ಗುವುದಕ್ಕೆ ಆಸ್ಪದಕೊಡದೆ, ರಸಹೀನವಾಗು ವುದಕ್ಕೆ ಮುಂಚೆ, ಕಂದಿ ಕುಂದಿಹೋಗುವುದಕ್ಕೆ ಮುನ್ನ ಅವುಗಳನ್ನು ಬಳಸಬೇಕು. ೧೬. ಪದಾರ್ಥಗಳು ಕೆಡದಂತೆ ಅವುಗಳನ್ನು ಮಿದಿಯುವ, ಅರೆಯುವ, ಉಜ್ಜಿ ಸ್ವಚ್ಛಪಡಿಸುವ, ಬೀಸುವ ಜನರನ್ನು ಕರೆಸಿ ಅವರಿಗೆ ಅಪ್ಪಣೆ ಮಾಡಿ ಹಸನು ಮಾಡಿಸಬೇಕು. ಇಂಥ ವಸ್ತುವನ್ನು ಹೀಗೆ ಶುದ್ಧಗೊಳಿಸಬೇಕು, ಹೀಗೆ ಮಾಡಿದರೆ ಚೆನ್ನ

ಕೆಲಗಂದು ಬೇರು ಗೆಣಸು ದಂಟು ಕುಡಿ ಕಾ
ಯೆಲೆ ಮಿಡಿಗಾಯಿಗಳೆಂಬ
ಪಲವಗೆ ಶಾಕದೊಳುಚಿತಾನುಚಿತವ
ನೆಲೆಯರಿವುದು ನೇಮದೊಳು ೧೭

ಕೊಳೆತ ಕಂದಿದ ಇಲಿ ತಿಂದುಳಿದ ಮೀಸ
ಲಳಿದಲ್ಲದವರು ತಂದಿತ್ತ
ಪುಳಿತ ಪೊಲ್ಲದ ನೆಲದೊಳು ಪುಟ್ಟದ ಶಾಕಂ
ಗಳನು ಕಳೆದು ಬಿಸುಡುವುದು ೧೮

ಆಚಾರದಿಂದನುಪಮಧರ್ಮದೇಳಿಗೆ
ಆಚಾರದಿಂದಾಯುಷ್ಯ
ಆಚಾರದಿಂದಿಹಪರವದರಿಂದ ಸ
ದಾಚಾರವತಿಯೆನಿಸುವುದು ೧೯

ಆದಿಯೆನಿಪುದಾಚಾರಂಗಳಿಗೆ ಮೀಹ
ವಾದ ಬಗೆಯೊಳದನರಿತು
ಆದರವೆರಸಿ ಮೀವುದು ಮೊದಲೊಳು ಮಿಕ್ಕ
ವೇದವಿಧಿಯನೆಗುವುದು ೨೦

- ಎನ್ನುವಂತೆ ತಿಳಿಯಹೇಳಿ ನೋಡಿಕೊಳ್ಳಬೇಕು. ೧೭. ಕಂದು, ಬೇರು, ಗೆಣಸು, ದಂಟು, ಚಿಗುರು, ಕಾಯಿ, ಎಲೆ, ಮಿಡಿಗಾಯಿ ಎಂಬ ಹಲವು ಬಗೆಯ ತರಕಾರಿಗಳ ಯೋಗ್ಯತೆ ಅನರ್ಹತೆಗಳನ್ನು ಕ್ರಮವಾಗಿ ತಿಳಿದುಕೊಳ್ಳಬೇಕು. ೧೮. ಕೊಳೆತದ್ದು, ಕಂದಿದ್ದು, ಇಲಿ ತಿಂದು ಮಿಕ್ಕದ್ದು, ಮೀಸಲುಹೋದದ್ದು, ತನಗೆ ಬೇಡವಾದವರು ತಂದು ಕೊಟ್ಟದ್ದು, ಹುಳಿತುಹೋದ, ಚೆನ್ನಲ್ಲದ, ನೆಲದಲ್ಲಿ ಬೆಳೆದ ತರಕಾರಿಗಳನ್ನು ಬಿಸುಡಬೇಕು.೧೯. ಸದಾಚಾರದಿಂದ ಉತ್ತಮವಾದ ವೃದ್ಧಿ, ಸತ್ಯಾಚರಣೆಯಿಂದ ಆಯುಷ್ಯ ವೃದ್ಧಿ, ಅದರಿಂದಲೇ ಇಹಪರ ಸಾಧನೆ. ಆದ್ದರಿಂದ ಸದಾಚಾರವೇ ಉತ್ತಮ ಎಂದೆನಿಸಿಕೊಳ್ಳುತ್ತದೆ. ೨೦. ಆಚಾರಗಳಲ್ಲಿ ಮೊದಲ ಆಚಾರವೆಂದರೆ ಸ್ನಾನ. ಅದನ್ನು ಚೆನ್ನಾಗಿ ತಿಳಿದು ಶ್ರದ್ಧೆಯಿಂದ ಮೊದಲು ಸ್ನಾನಮಾಡಬೇಕು, ಅನಂತರ ಶಾಸ್ತ್ರೋಕ್ತವಾಗಿ

ಇಳಿದು ನೀರೊಳು ಮೀವುದಿದಕಾರದವರು ಮೈ
ದೊಳೆವುದು ಮಂಡೆಯನುಳಿದು
ಚಳಿಯ ಸೈರಿಸಲಾರದ ಸತಿಯರು ಬಿಸಿ
ಯೊಳು ಮೀವುದು ಮೈದೊಳೆವುದು ೨೧

ಬಳೆದ ಬೇನೆಯ ಬಡಮೆಯ್ಯ ಭಾವೆಯರೆದ್ದು
ತೊಳೆದು ಕೈಕಾಲು ಮೊಗಗಳ
ಉಳಿದಂಗವನು ನನೆದುಡೆಯೊಳು ತೊಡೆವುದು
ಕಳೆವುದು ಪಾಪಕರ್ಮವನು ೨೨

ನೀರೊಳು ಮೆಯ್ಯ ನೇಮದೊಳು "ಕರಣಗಳ"
ಭೂರಿಸತ್ವದೊಳು ಬುದ್ಧಿಯನು
ನಾರಾಯಣನಾಳುತನದೊಳಾತ್ಮನ ತೊಳೆ
ದೋರಂತೆ ಒಳ್ಳುವಡೆವುದು ೨೩

ಸಲೆ ಚಿನ್ನ ಬೆಳ್ಳಿ ಹಿತ್ತಳೆ ಕಂಚು ತಾಮ್ರದ
ಪಲಬಗೆ ಪಾತ್ರಂಗಳನು
ಕಿಲುಬಿನ ಕರೆ ತೋರದಂತಾದರದಿಂ
ದಲಸದೆ ತೊಳೆವುದಂದಂದು ೨೪

ಇತರ ಕಾರ್ಯಗಳನ್ನು ಕೈಗೊಳ್ಳಬೇಕು. ೨೧. ನೀರಿನಲ್ಲಿ ಇಳಿದು ಸ್ನಾನಮಾಡಬೇಕು. ಸಾಧ್ಯವಾಗದವರು ತಲೆಯನ್ನು ಬಿಟ್ಟು ಉಳಿದ ಶರೀರವನ್ನು ಸ್ನಾನದಿಂದ ಶುಭ್ರಗೊಳಿಸಬೇಕು. ಚಳಿ ತಡೆಯಲಾರದ ಸ್ತ್ರೀಯರು ಬಿಸಿನೀರಿನಿಂದ ಮೈತೊಳೆದುಕೊಳ್ಳಬೇಕು. ೨೨. ರೋಗಿಷ್ಠರಾದ, ಕೃಶಾಂಗಿಯರಾದ ಹೆಂಗಸರು ಕೈಕಾಲು ಮುಖಗಳನ್ನು ತೊಳೆದುಕೊಂಡು ಶರೀರದ ಉಳಿದ ಭಾಗಗಳನ್ನು ಒದ್ದೆಬಟ್ಟೆಯಿಂದ ಒರೆಸಿಕೊಳ್ಳಬೇಕು. ಈ ಮೂಲಕ ಪಾಪಕರ್ಮಗಳನ್ನು ತೊಡೆದುಹಾಕಬೇಕು. ೨೩. ದೇಹವನ್ನು ನೀರಿನಿಂದ, ಇಂದ್ರಿಯಗಳನ್ನು ವ್ರತನಿಯಮಗಳಿಂದ, ಬುದ್ಧಿಯನ್ನು ಸತ್ವದಿಂದ, ಆತ್ಮವನ್ನು ನಾರಾಯಣನ ಭಕ್ತಿಯಿಂದ ತೊಳೆದು ಶುದ್ಧಿಗೊಳ್ಳಬೇಕು. ೨೪. ಚಿನ್ನ, ಬೆಳ್ಳಿ, ಹಿತ್ತಾಳೆ, ಕಂಚು, ತಾಮ್ರದ ಬೇರೆ ಬೇರೆ ಪಾತ್ರೆಗಳನ್ನು ಕಿಲುಬಿಲ್ಲದ ಹಾಗೆ

---

೩. (ಖ) ಇಂದ್ರಿಯಗಳ

ಅಡಿಗೆಮನೆಗೆ ದೇವತಾರ್ಚನೆಯೆಡೆಗೆ ತಾ
ವಡಿದೊಳೆವುದಕೆಂದು ಬೇರೆ
ಮಡಗಿಸುವುದು ಮರ್ಯಾದೆಯರಿತು ನೀರ
ಕೊಡಗಳ ಕುಲಪಾಲಕಿಯರು ೨೫

ರಚನೆಯ ಬಗೆ ರಯ್ಯಮಾಗೆಯುಪಸ್ಕರ
ಉಚಿತಮೆನಿಸಿಯೊಳ್ಳುವಡೆಯೆ
ಶುಚಿ ರುಚಿಯಪ್ಪಂತೆ ಸುಯಿಧಾನದೊಳ್ಳೆದೆ
ಪಚನಗೈವುದು ಭಾವೆಯರು ೨೬

ಬೆಂದು ಬೇಯದೆ ಗಬ್ಬದೊಳು ಪಸಿಯಾದುದ
ಬೆಂದುರೆ ತಳ ಪೊತ್ತಿದುದನು
ಅಂದವಳಿದುದನಚ್ಯುತನಾರೋಗಣೆ
ಗೆಂದು ಮುಂದಿಡದೆ ಕಳೆವುದು ೨೭

ಮೈದೊಳೆಯದ ಮಡಿಯುಡದ ಮೈಲಿಗೆಯೆಂಜ
ಲಾದ ನಾರಿಯರನುಗೈದ
ಈ ದೇವರಾ ದೇವರಿಗೆಂದುದನು ನಿ
ವೇದಿಸಲಾಗದಚ್ಯುತಗೆ ೨೮

ಬೇಸರಪಟ್ಟುಕೊಳ್ಳದೆ ಅಂದಂದೇ ತೊಳೆದಿಟ್ಟುಕೊಳ್ಳಬೇಕು. ೨೫. ಕುಲವನ್ನು ಪಾಲಿಸುವ ಸಾಧ್ವಿಯರು ಅಡುಗೆಮನೆಗೆ ಬೇರೆ, ದೇವರಪೂಜೆಗೆ ಬೇರೆ, ಕಾಲು ತೊಳದು ಕೊಳ್ಳುವುದಕ್ಕೆ ಬೇರೆ ಎಂದು ಗೌರವದಿಂದ ನೀರಿನ ಕೊಡಗಳನ್ನು ಬೇರೆ ಬೇರೆಯಾಗಿರಿಸಬೇಕು. ೨೬. ಅಡಿಗೆಯ ವಿಧಾನ ಪರಿಷ್ಕೃತವಾಗಿರಬೇಕು. ಉಚಿತ ವಾದ ಪದಾರ್ಥಗಳನ್ನು ಅಟ್ಟು, ಶುಚಿ, ರುಚಿ ಎರಡನ್ನೂ ಗಮನದಲ್ಲಿಟ್ಟುಕೊಂಡು ಜಾಗರೂಕತೆಯಿಂದ ಅಡುಗೆ ಮಾಡಬೇಕು. ೨೭. ಅರ್ಧ ಬೆಂದ, ಒಳಗೆ ಹಸಿಯಾಗಿಯೇ ಉಳಿದ, ಹೆಚ್ಚಾಗಿ ಬೆಂದು ತಳಹತ್ತಿದ ರೂಪುಗೆಟ್ಟ ಪದಾರ್ಥ ಗಳನ್ನು ದೇವರ ಆರೋಗಣೆಗೆ ಅರ್ಹವಲ್ಲ ಎಂದು ತೆಗೆದಿಡಬೇಕು. ೨೮. ಮೈ ತೊಳೆಯದೆ ಮಡಿಮಾಡಿ ಕೊಳ್ಳದೆ ಮೈಲಿಗೆಯಿಂದ, ಎಂಜಲಾದ ಸ್ತ್ರೀಯರು ಮಾಡಿದ ಪದಾರ್ಥಗಳನ್ನೂ, ಆ ದೇವರಿಗೆ ಈ ದೇವರಿಗೆ ಎಂದು ಬೇರೆ ದೇವರಿಗೆ ಎಂದು ಮೀಸಲಿಟ್ಟು ಅಡುಗೆಯನ್ನೂ ಅಚ್ಯುತನ ನೈವೇದ್ಯಕ್ಕೆ ಒಪ್ಪಿಸಬಾರದು.

ದೇವರಿಗೆರಗಿ ದೇವರ ಮನೆವೊಕ್ಕಲ್ಲಿ
ತೀವಿರುವುಪಕರಣಗಳ
ಸಾವಧಾನದಿ ಸಜ್ಜುಗೈವುದು ಜನ್ಮವ
ಪಾವನವೆನಿಸಿ ಬಾಳುವುದು ೨೯

ಸಾರಿಸಿ ರಂಗವಲ್ಲಿಯ ಸರಗೊಳಿಸಿ ದೀ
ಪಾರೋಪಣವನಾಚರಿಸಿ
ಹಾರುತ ಮನದನ್ನನ ಬರವನೆ ಮನ
ವಾರೆ ಕಾದಿಹುದು ಕಾಂತೆಯರು ೩೦

ಒಡನೆ ತನ್ನಿಷ್ಟದೇವತೆಗಾರೋಗಣೆ
ವಡಿಸಿ ತಂದಮೃತಾನ್ನವನು
ತಡೆಯದಿನಿಯನನುಮತಿವಡೆದದನುಣ
ಬಡಿಸುವುದುಪಚರಿಸುವುದು ೩೧

ಅತಿಥಿಗಳಭ್ಯಾಗತರೊಡನಧವರ
ಯತಿಯಾಚಕರೆಲ್ಲರನು
ಪತಿಕರಿಸುವುದು. ಬಳಿಕ ಸಂತಸದೊಳು
ಸತಿಯರು ಸವಿವುದನ್ನವನು ೩೨

ತಿಳಿವಂತೆ ಪೇಳುವ ದೇಶಿಕೋತ್ತಮನಂಘ್ರಿ
ನಳಿನಂಗಳಿಗೆ ನತಿಗೈದು
ಬಳಿಕ ಭಾರತ ಭಾಗವತ ರಾಮಾಯಣ
ದೊಳುಗತೆಗಳನು ಕೇಳುವುದು ೩೩

೨೯. ದೇವರಿಗೆ ನಮಸ್ಕಾರ ಮಾಡಿ, ದೇವರಮನೆಯನ್ನು ಪ್ರವೇಶಿಸಿ, ಅಲ್ಲಿ ತುಂಬಿರುವ ದೇವಾರ್ಚನೆಯ ಉಪಕರಣಗಳನ್ನು ನಿಧಾನವಾಗಿ ಸಜ್ಜುಗೊಳಿಸಿ ತನ್ನ ಬಾಳು ಸಾರ್ಥಕವಾಯಿತು ಎಂದು ಭಾವಿಸಿ ಬಾಳಬೇಕು. ೩೦. ದೇವರ ಮನೆಯನ್ನು ಸಾರಿಸಿ ರಂಗವಲ್ಲಿಯಿಟ್ಟು, ದೀಪಗಳನ್ನು ಸಾಲಾಗಿ ಜೋಡಿಸಿ ಹಚ್ಚಿ ಗಂಡನ ಬರುವಿಕೆಯನ್ನು ಹಾರೈಸುತ್ತಿರಬೇಕು. ೩೧. ಕೂಡಲೆ ತನ್ನ ಇಷ್ಟದೈವಕ್ಕೆ ಊಟಮಾಡಿಸಿ, ಸಿದ್ಧಪಡಿಸಿದ ಅಮೃತಾನ್ನವನ್ನು ಪ್ರಿಯನ ಅನುಮತಿ ಪಡೆದು ಅವನಿಗೆ ಬಡಿಸಬೇಕು. ಊಟ ಮಾಡುವಾಗ ಉಪಚರಿಸಬೇಕು. ೩೨. ಅತಿಥಿಗಳು, ಅಭ್ಯಾಗತರು, ದೀನರು, ಯತಿಗಳು, ಯಾಚಕರು ಎಲ್ಲರನ್ನು ಉಪಚರಿಸಿ ಅನಂತರ ಸಂತೋಷದಿಂದ ಸತಿಯರು ಊಟಮಾಡಬೇಕು. ೩೩. ತನ್ನ ಮನಸ್ಸಿಗೆ ಹಿಡಿಯುವಂತೆ ಹೇಳುವ ಆಚಾರ್ಯರ ಪಾದಕಮಲಗಳಿಗೆ ನಮಸ್ಕರಿಸಿ ಅನಂತರ ಭಾರತ, ಭಾಗವತ ಮತ್ತು

ತಿಳಿದದರೊಳು ತತ್ವದಿರವ ಮಾಧವನಂಘ್ರಿ
ಯೊಳು ಭಕ್ತಿಭಾವವ ಬಲಿಸಿ
ಕಳೆವುದು ಸಕಲ ಕರಣ ಕಲ್ಮಷಗಳ
ತೊಳೆವುದು ಮನದ ಧೂಳುಗಳ ೩೪

ಏರುಜವ್ವನದ ನೀರೆಯರಿನಿತನಿತಕ್ಕೆ
ಮೋರೆಗಾಣಿಸಿ ಮುಂಬರಿಯದೆ
ಮೀರಬಾರದ ಕಜ್ಜದೊಳು ಮೇರೆಯರಿತು ಮೈ
ದೋರಿ ನಡೆವುದುಚಿತದೊಳು ೩೫

ಸಜ್ಜುವಡೆಯೆ ಸೌಮ್ಯತೆ ಸರ್ವಾಂಗದೊ
ಳುಜ್ಜುಗಗೊಳಿಯೊಳ್ನಡತೆ
ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ
ಪಜ್ಜೆಯಿಡುವುದು ಭಾವೆಯರು ೩೬

ನೆಲನ ನಿಟ್ಟಿಸೆ ದಿಟ್ಟಿ ನೇಮದೊಳಿರೆ ಮನ
ತಲೆ ನಸುಮಣಿದಂದವಡೆಯೆ
ಒಲೆಯದೆ ಮೆಯ್ಯೊಪ್ಪದೊಳಿರೆ ಒಯ್ಯನೆ
ಕುಲವಧು ಪಜ್ಜೆಗೊಳುವುದು ೩೭

ರಾಮಾಯಣ ಒಳ್ಳೆಯ ಕಥೆಗಳನ್ನು ಕೇಳಬೇಕು. ೩೪. ಅದರಲ್ಲಿರುವ ತತ್ವದ ಮರ್ಮವನ್ನು ತಿಳಿದು, ವಿಷ್ಣುವಿನ ಪಾದದಲ್ಲಿ ಭಕ್ತಿಯನ್ನು ಬೆಳಸಿಕೊಂಡು ಇಂದ್ರಿಯಗಳ ಕೊಳೆಗಳನ್ನು ಕಳೆದು ಮನಸ್ಸಿನ ಧೂಳುಗಳನ್ನು ಕೊಡವಿಹಾಕಬೇಕು. ೩೫. ಪ್ರಬುದ್ಧ ಯೌವನೆಯರು ಅಲ್ಲಸ್ವಲ್ಪಕ್ಕೆಲ್ಲ ಮುಖತೋರಿಸಿ ಮುಂದೆ ನುಗ್ಗದೆ, ಮೀರಬಾರದ ಕಾರ್ಯದಲ್ಲಿ ಮಿತಿಯರಿತು ಪ್ರವೇಶಿಸಿ ಯೋಗ್ಯವಾಗಿ ನಡೆದುಕೊಳ್ಳಬೇಕು. ೩೬. ಸರ್ವಾಂಗಗಳಲ್ಲಿ ಸೌಮ್ಯಸ್ವಭಾವ ತುಂಬಿಕೊಳ್ಳಲು, ಒಳ್ಳೆಯ ನಡತೆ ಎಲ್ಲ ಕಾರ್ಯಗಳಲ್ಲಿ ಕಂಡುಬರಲು, ಲಾವಣ್ಯದ ಜೊತೆ ನಾಚಿಕೆ ಬೆರೆಯಲು ಸಾಧ್ವಿಯರು ನಿಧಾನವಾಗಿ ಹೆಜ್ಜೆಯಿಟ್ಟು ನಡೆಯುತ್ತಾರೆ. ೩೭. ದೃಷ್ಟಿ ನೆಲವನ್ನು ನೋಡಬೇಕು. ಮನಸ್ಸು ನೇಮದಲ್ಲಿ ಅಂಟಿರಬೇಕು. ತಲೆ ಸ್ವಲ್ಪ ಬಾಗಿರಬೇಕು. ದೇಹ ತೂಗಾಡದೆ ನಿಶ್ಚಲವಾಗಿರಬೇಕು.

ತನ್ನೊಡಲಿಗೆ ತನ್ನ ಮನವ ಕಾಪಿಡುವುದು
ತನ್ನ ಮನಕೆ ತನ್ನ ಮತಿಯ
ತನ್ನ ಮತಿಗೆ ತನ್ನ ಸಾತ್ವಿಕ ಧೈರ್ಯವ
ನುನ್ನತಿವಡೆದೊಪ್ಪುವುದು ೩೮

ತನ್ನ ಮನೆ ಬಡತನಗಳ ಧನಗಳ
ತನ್ನಿನಿಯನ ತಪ್ಪುಗಳ
ತನ್ನ ಮರವೆ ಮೋಸಗಳನವರಿವರೊಳು
ಬಿನ್ನವಿಸದೆ ಮರಸುವುದು ೩೯

ಪರವೇಳೆಯೊಳು ಪರಿಯದೆ ತಾಯ್ಮನೆಗಲ್ಲಿ
ಪಲವಗಲಿದ್ದು ನೆಲಸದೆ
ಪಲಬಗೆಯೊಳು ಪತಿಪದವನಗಲಿದೊಂದು
ಕಲೆಯ ಕಲ್ಪದವೋಲೆಣಿಪುದು ೪೦

'ಪೆರರ ಮರ್ಮವ ಪೆರರಾಲೋಚನೆಗಳ
ಪೆರರೇಕಾಂತದೆಸಕವ
ಪೆರತೊರ್ವರಿಗೆ ಪೇಳುವ ಬೆಸನವ ಬಿಟ್ಟು
ನೆರೆ ನೇಮದೊಳು ನೆಲಸುವುದು' ೪೧

ಹೀಗಿರುವ ಕುಲಸ್ತ್ರೀ ಸನ್ಮಾರ್ಗದಲ್ಲಿರುತ್ತಾಳೆ. ೩೮. ತನ್ನ ಶರೀರವನ್ನು ತನ್ನ ಮನಸ್ಸಿನಿಂದ ರಕ್ಷಿಸಿಕೊಳ್ಳಬೇಕು. ತನ್ನ ಮನಸ್ಸನ್ನು ಬುದ್ಧಿಯಿಂದ, ಬುದ್ಧಿಯನ್ನು ಸಾತ್ವಿಕ ಧೈರ್ಯದಿಂದ ಕಾಪಾಡಿಕೊಂಡರೆ ಆಕೆ ಖ್ಯಾತಿವೆತ್ತ ಕುಲವಧು ಎನ್ನಿಸಿಕೊಳ್ಳುತ್ತಾಳೆ. ೩೯. ತನ್ನ ಸಂಸಾರದ ಬಡತನವನ್ನಾಗಲಿ ಶ್ರೀಮಂತಿಕೆಯನ್ನಾಗಲಿ ತನ್ನ ಗಂಡನ ತಪ್ಪುಗಳನ್ನಾಗಲಿ ತನ್ನ ಮರವು ಮೋಸಗಳನ್ನಾಗಲಿ ಅವರಿವರಲ್ಲಿ ಹೇಳಿಕೊಳ್ಳದೆ ಅವುಗಳನ್ನು ಮರೆತುಬಿಡಬೇಕು. ೪೦. ಹಲವುಕಾಲ ಹೊರಗೆ ತಿರುಗಾಡದೆ, ತಾಯಿಮನೆಯಲ್ಲಿ ಅನೇಕ ದಿನಗಳವರೆಗೆ ನೆಲಸದೆ, ವಿಧವಿಧ ಕಾರಣಗಳಿಂದ ಗಂಡನ ಸಾನ್ನಿಧ್ಯವನ್ನು ಬಿಟ್ಟಿರದೆ ಅಗಲಿದ ಒಂದು ನಿಮಿಷ ಒಂದು ಯುಗ ಎಂದು ಭಾವಿಸುತ್ತಿರಬೇಕು. ೪೧. ಇನ್ನೊಬ್ಬರ ರಹಸ್ಯವನ್ನು, ಇನ್ನೊಬ್ಬರ ಆಲೋಚನೆಗಳನ್ನು, ಮತ್ತೊಬ್ಬರ ಏಕಾಂತದ ಕಾರ್ಯವನ್ನು ಬೇರೊಬ್ಬರಿಗೆ ಹೇಳುವ ಚಟವನ್ನು ಬಿಟ್ಟು ನೇಮದಿಂದ ಇರುವುದನ್ನು ಕಲಿಯಬೇಕು.

ನೆರೆಮನೆ ಮನೆವಾರ್ತೆಯನಿಂತಿಂತೆಂದು
ಪರಿಹಾಸಗೈದು ಪಳಿಯದೆ
ಪರರೊಳು ಪರಿವಾದವ ಬಣ್ಣಿಸುವರೊಡ
ವೆರಸದೆ ಬೇರೆನಿಸುವುದು ೪೨

ಪರಿದೂರ ಬೀಧಿ ಬೀದಿಯ ಪಲವನೆಯೊಳು
ತಿರುಗುವ ದಿಟ್ಟವೆಣ್ಗಳನು
ಕರೆದು ಮನ್ನಿಸದೇಕಾಂತವನಾಡದೆ
ಪರಿಹರಿಪುದು ಪದುಳದೊಳು ೪೩

ಬಂಡು ಬೂತಾಟದ [ಬಣ್ಣನೆ]ಯನು ಕಿವಿ
ಗೊಂಡು ಕೇಳದೆ ಕುರುಪಿಡದೆ
ಚಂಡಿ ಚಪಲೆ ಚಾಡಿಕಾತಿಯೆನಿಸದೆ ನ
ಲ್ವೆಂಡಿರಿರ್ಪುದು ನಲ್ಮೆಯೊಳು ೪೪

ಕೆಟ್ಟರಳಿದರೆಂಬ ಕೀರ್ತಿಗಂಜದೆ "[ಚ]ಳಿ
ಬಿಟ್ಟ ಕೆಳದಿ ಪೆಣ್ಗಳೊಳು
ನೆಟ್ಟನೆ ಬಳೆದಿರ್ದ ನೇಹವ ನೆನೆಯದೆ
ಪೊಟ್ಟು ಕಳೆದು ಪೊರಡಿಪುದು ೪೫

೪೨. ನೆರೆಹೊರೆಯವರ ಸಂಸಾರವನ್ನು ಹೀಗೆ ಹಾಗೆ ಎಂದು ಹಾಸ್ಯಮಾಡಿ ಆಕ್ಷೇಪಣೆ ಮಾಡದೆ, ದೂಷಿಸದೆ, ಬೇರೆಯವರಲ್ಲಿ ಪ್ರತಿವಾದ ಹೂಡುವವರ ಸ್ನೇಹವನ್ನು ಬಯಸದೆ ಬೇರೆಯಾಗಿ ನಿಲ್ಲಬೇಕು. ೪೩. ಬೀದಿ ಬೀದಿ ತಿರುಗಿ ಹತ್ತಾರು ಮನೆಗಳಿಗೆ ಹೋಗಿಬರುವ ದಿಟ್ಟ ಹೆಂಗಸರನ್ನು ಆಹ್ವಾನಿಸಲೇ ಬಾರದು. ಅವರೊಡನೆ ರಹಸ್ಯ ವೇನನ್ನೂ ಆಡಬಾರದು. ಉಪಾಯದಿಂದ ಅವರನ್ನು ದೂರವಿಡಬೇಕು. ೪೪. ಹಟ ಮಾರಿತನದ ಬೂತಾಟದ ಮೋಹಕ ಮಾತುಗಳನ್ನು ಕಿವಿಯಾರ ಕೇಳದೆ ಅವನ್ನು ಗುರುತಿಟ್ಟುಕೊಳ್ಳದೆ ಚಂಡಿ ಚಪಲೆ ಚಾಡಿಕಾತಿ ಎಂಬ ಹೆಸರನ್ನು ಗಳಿಸದೆ ಒಳ್ಳೆಯ ಹೆಂಡತಿಯರು ವಿಶ್ವಾಸದಿಂದಿರಬೇಕು. ೪೫. ಕೆಟ್ಟರು - ಹಾಳಾದರು ಎಂಬ ಅಪ ಕೀರ್ತಿಗೆ ಹೆದರದೆ ಚಳಿಬಿಟ್ಟ (ನಾಚಿಕೆಬಿಟ್ಟ) ಸಖಿಯರಲ್ಲಿ ಬೆಳೆದಿದ್ದ ಸ್ನೇಹವನ್ನು

ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ
ಲಂಡವೆಣ್ಗಳ ಲಾಲಿಸದೆ
ಪುಂಡವೆಣ್ಗಳೊಳು ಪೊರ್ದುಗೆವಡೆಯದೆ ನ
ಲ್ವೆಂಡಿರೊಡನೆ ಬೆರಸುವುದು ೪೬

ಕಂಡಕಡೆಗೆ ನಡೆನಡೆದಳುಕದೆ ಕಾಲು
ಗಂಡ ಕರಾಳಿವೆಣ್ಣುಗಳ
ಅಂಡಲೆದವರೊಳು ಬಳೆದೊಳ್ನೇಹವ
ಬೆಂಡುಗಳೆದು ಬಿಡಿಸುವುದು ೪೭

ಮರುಳಾಗಿ ಮತ್ತೆ ಮಬ್ಬಿನೊಳಿದದಿಲ್ಲೆಂ
ದೊರೆದಿನಿಯನನೇಳಿಸದೆ
ಇರುಳಿಗೆಂದಿಳಿವೊತ್ತಿನೊಳೆಲ್ಲ ವಸ್ತುವ
ತರಿಸುವುದನುವಡಿಸುವುದು ೪೮

ನೆನೆದೊಂದೊಂದನೆಡೆಯೊಳಿದ್ದಾಣ್ಮನ
ಮನವ ನೋಯಿಸಿ ಮರುಗಿಸದೆ
ಮನೆಗೆಲಸವನೆಲ್ಲವನಾರೈದು ಮ
ತ್ತಿನಿಯನ ಶಯ್ಯೆಗೇರುವುದು ೪೯

ಮನಗಾಣದೆ ಅವರನ್ನು ಆಚೆಗೆ ಕಳಿಸಬೇಕು. ೪೬. ತುಂಟ ಹೆಂಗಸರ ಸ್ನೇಹದ ತೊಡಕಿಗೆ ಸಿಕ್ಕಿಹಾಕಿಕೊಳ್ಳದೆ, ಲಂಪಟಸ್ತ್ರೀಯರನ್ನು ಪೋಷಿಸದೆ, ಪುಂಡರಾದ ಹೆಂಗಸರಲ್ಲಿ ಸೇರ್ಪಡೆಯಾಗದೆ, ಒಳ್ಳೆಯ ಗೃಹಿಣಿಯರ ಜೊತೆ ಸ್ನೇಹ ಬೆಳೆಸಬೇಕು. ೪೭. ಸಿಕ್ಕಿದ ಕಡೆ ಓಡಾಡುವ, ಹೆದರದೆ ತಿರುಗಾಡುವ, ದಿಟ್ಟಹೆಣ್ಣುಗಳಲ್ಲಿ ಹಿಂದೆ ಬೆಳೆದ ಸ್ನೇಹವನ್ನು ಕಿತ್ತುಹಾಕಿ ಅವರ- ಸಹವಾಸದಿಂದ ಬಿಡಿಸಿಕೊಳ್ಳಬೇಕು. ೪೮. ಬುದ್ಧಿಮಂಕಳಾಗಿ, ಮರೆತು 'ಅದಿಲ್ಲ' 'ಇದಿಲ್ಲ' ಎಂದು ಹೇಳದೆ, ಪತಿಯನ್ನು ತಿರಸ್ಕರಿಸದೆ, ರಾತ್ರಿಗೆ ಬೇಕಾದ ಪದಾರ್ಥಗಳನ್ನೆಲ್ಲ ಸಂಜೆಗೆ ಮುಂಚೆಯೇ ತರಿಸಿಕೊಂಡು ಸಿದ್ಧಮಾಡಿಟ್ಟುಕೊಳ್ಳಬೇಕು. ೪೯. ಒಂದೊಂದನ್ನಾಗಿ ನೆನಪಿಗೆ ತಂದುಕೊಂಡು, ಹತ್ತಿರದಲ್ಲಿದ್ದ ಗಂಡನ ಮನಸ್ಸನ್ನು ನೋಯಿಸಿ ದುಃಖವಾಗುವಂತೆ ನಡೆದುಕೊಳ್ಳದೆ ಮನೆಕೆಲಸವನ್ನೆಲ್ಲ ನಿಧಾನವಾಗಿ ಯೋಚಿಸಿ ಮಾಡಿ, ಅನಂತರ

ಪಗಲಿರುಳೀ ಪರಿಯೊಳು ನಡೆದಿನಿಯನ
ಬಗೆಯ ತಿಳಿದು ಬಂದಿಗೊಂಬ
ಸುಗುಣೆಯರಿಹಪರದೊಳು ಸೂರೆಗೊಂಬರು
ಸೊಗದ ಸುಗ್ಗಿಯ ಸುಲಭದೊಳು ೫೦

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
ಉನ್ನತಿವಡೆದೊಪ್ಪಿದುದೆಂಟನೆಯ ಸಂಧಿ
ಸನ್ನುತ ಗುಣಸಂಬಂಧಿ ೫೧

ಪತಿಯ ಸಜ್ಜೆಗೆ ಸಿದ್ಧಳಾಗಬೇಕು. ೫೦. ಹಗಲು ರಾತ್ರಿ ಹೀಗೆ ನಡೆದುಕೊಂಡ, ಹತಿಯ ಮನಸ್ಸನ್ನು ಅರಿತು ಅವನ ಸೆರೆಯಾಗುವ ಗುಣವಂತೆಯರು ಇಹಪರಗಳಲ್ಲಿ ಸುಖದ ಸುಗ್ಗಿಯನ್ನು ಸೂರೆಗೊಳ್ಳುತ್ತಾರೆ. ೫೧. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ ರಚಿಸಿದ ಕಾವ್ಯದಲ್ಲಿ ಗುಣಯುಕ್ತವಾದ ಎಂಟನೆಯ ಸಂಧಿ ಖ್ಯಾತಿ ಪಡೆದು ಸಮಾಪ್ತವಾಯಿತು.

# ಒಂಭತ್ತನೆಯ ಸಂಧಿ

ಆವನಾಣತಿಯೊಳಿಗ ಕರ್ಮಯೋಗ ಮ
ತ್ತಾವನ ನೆನಹು ವಿಜ್ಞಾನ
ಆವನೊಳೆರಕ ಭಕುತಿಯಾ ಪರವಾಸು
ದೇವನಿಗಾನೆರಗುವೆನು ೧

ಜ್ಞಾನ ವೈರಾಗ್ಯ ಶ್ರೀಹರಿಭಕ್ತಿ ಸತ್ಕರ್ಮ
ಹೀನರನೆಮ್ಮನಾರೈದು
ಆ ನಾರಾಯಣನಡಿಗೆರಗಿಪ ಸಿರಿ
ಗಾನತಿಗೈದು ಬಾಳುವೆನು ೨

ಪತಿಪಾದಭಕ್ತೆಯರೆನಿಪ ಸತಿಯರು ತಾ
ವತಿಶಯ ಗತಿಗೆಳಸಿದೊಡೆ
ಇತರ ಚಿಂತೆಯನುಳಿದೇಕಚಿತ್ತದೊಳು ಶ್ರೀ
ಪತಿಪಾದವನೆ ಭಜಿಸುವುದು ೩

ಆವ ದೇವರನಾವರು ಭಜಿಸುವರಾ
ದೇವರನವರು ಸೇರುವರು
ಆವ ಭೋಗದೊಳಾ ದೇವರಿರ್ಪರು ತಾ
ವಾ ವಿಧದೊಳು ಬಾಳುವರು ೪

೧. ಯಾವನ ಆಜ್ಞೆಯಂತೆ ದುಡಿದರೆ ಅದು ಕರ್ಮಯೋಗವಾಗುತ್ತದೆಯೋ, ಯಾವನ ಧ್ಯಾನ ವಿಜ್ಞಾನವಾಗುತ್ತದೆಯೋ ಯಾವನಲ್ಲಿ ಪ್ರೀತಿ ಭಕ್ತಿಯಾಗುತ್ತದೆಯೋ ಅಂಥ ಪರವಾಸುದೇವನಿಗೆ ನಾನು ನಮಸ್ಕರಿಸುತ್ತೇನೆ. ೨. ಜ್ಞಾನ, ವೈರಾಗ್ಯ, ಭಕ್ತಿ, ಸತ್ಕರ್ಮರಹಿತರಾದ ನಮ್ಮನ್ನು ಪ್ರೀತಿಯಿಂದ ಕೈಹಿಡಿದು ಆ ನಾರಾಯಣನ ಪಾದಗಳಿಗೆ ನಮಸ್ಕರಿಸುವಂತೆ ಯಾರು ಪ್ರೇರಿಸುತ್ತಾಳೋ ಆ ಲಕ್ಷ್ಮೀದೇವಿಗೆ ವಂದನೆಗೈದು ಬದುಕುತ್ತೇನೆ. ೩. ಪತಿಪಾದಭಕ್ತೆಯರು ಎಂದು ಕೀರ್ತಿಪಡೆದ ಸ್ತ್ರೀಯರು ತಮಗೆ ಇನ್ನೂ ಉತ್ತಮಗತಿ ಬೇಕು ಎಂದು ಬಯಸಿದರೆ, ಇತರ ಆಲೋಚನೆಗಳನ್ನು ಬಿಟ್ಟು ಒಂದೇ ಮನಸ್ಸಿನಿಂದ ಲಕ್ಷ್ಮೀಪತಿಯ ಪಾದಕಮಲಗಳನ್ನು ಭಜಿಸಲಿ. ೪. ಯಾರು ಯಾವ ದೇವರನ್ನು ಭಜಿಸುತ್ತಾರೆಯೋ ಅವರು ಆ ದೇವರನ್ನು ಸೇರುತ್ತಾರೆ. ಆ ದೇವರು ಯಾವ ಸುಖಭೋಗವನ್ನು ಅನುಭವಿಸುತ್ತಿರುವರೋ ಭಕ್ತರೂ ಅಂಥ ಭೋಗವನ್ನೇ

**ಶ್ರೀವರನಡಿಯ ಸೇರಿದರನುಳಿದು ಮಿಕ್ಕ**
**ದೇವಲೋಕವನೇರಿದವರು**
**ದೇವರೊಡನೆ ತಾವುಮಳಿವರೆಂಬುದನು ಗೀ**
**ತಾವಚನದೊಳು ತಿಳಿವುದು** **೫**

*ಅದೆಂತೆನೆ :*
*ಶ್ಲೋ* // ಆಬ್ರಹ್ಮಭುವನಾಲ್ಲೋಕಾಃ
ಪುರನಾವರ್ತಿನೋಽರ್ಜುನ
ಮಾಮುಪೇತ್ಯ ತು ಕೌಂತೇಯ
ಪುನರ್ಜನ್ಮ ನ ವಿದ್ಯತೇ ॥

ಭಗವದ್ಗೀತಾ : ಅಧ್ಯಾಯ ೮, ಶ್ಲೋಕ ೧೬

**ಪರಹಿಂಸೆಯೆಸಗದೆ ಪರಧನಕಳುಪದೆ**
**ಪರಪುರಷಂಗಾಸೆವಡದೆ**
**ಸಿರಿಯರಸನ ಪಾದಸೇವೆಗೈದವರಾ**
**ಪರಮಪದವನು ಸೇರುವರು** **೬**

**ಚಾಡಿವೇಳದೆ ಚಂಡಿತನವೆಸಗದೆ ಚುನ್ನ**
**ವಾಡದೆ ಜರೆದು ನುಡಿಯದೆ**
**ಕೇಡೆಣಿಸದೆ ಕೆಲರಿಗೆ ಹರಿಪದಸೇವೆ**
**ಗೀಡಾಗಿ ಗತಿಯ ಪಡೆವುದು** **೭**

ಪಡೆಯುವರು. ೫. ಲಕ್ಷ್ಮೀಪತಿಯ ಪಾದವನ್ನು ಸೇರಿದವರನ್ನು ಬಿಟ್ಟು ಉಳಿದ ದೇವರನ್ನು ಸೇವಿಸಿ ಸ್ವರ್ಗಲೋಕವನ್ನು ಪಡೆದರೂ ಆಯಾ ದೇವರೊಡನೆ ನಾಶಹೊಂದುವರು ಎಂಬುದು ಗೀತಾವಚನ.

*"ಬ್ರಹ್ಮಲೋಕ ಪರ್ಯಂತವಾಗಿ ಜನರು*
*ಪುನಃ ಪುನಃ ಜನ್ಮತಳೆದು ಬರುತ್ತಾರೆ ಅರ್ಜುನ,*
*ಆದರೆ ನನ್ನನ್ನು ಪಡೆದ ಬಳಿಕ*
*ಪುನರ್ಜನ್ಮ ಇರುವುದಿಲ್ಲ" -*

ಭಗವದ್ಗೀತಾ. ಅಧ್ಯಾಯ ೮-ಶ್ಲೋಕ ೧೬

೬. ಪರರಿಗೆ ಹಿಂಸೆಮಾಡದೆ, ಇನ್ನೊಬ್ಬರ ಹಣಕ್ಕೆ ಆಸೆಪಡದೆ ಪರಪುರುಷನನ್ನು ಬಯಸದೆ, ಲಕ್ಷ್ಮೀರಮಣನ ಪಾದಸೇವೆ ಮಾಡಿದವರು ಮುಕ್ತಿಯನ್ನು ಪಡೆಯುತ್ತಾರೆ. ೭. ಚಾಡಿ ಹೇಳದೆ, ಹಟಮಾರಿತನ ಬೆಳೆಸಿಕೊಳ್ಳದೆ, ಸುಳ್ಳು ಹೇಳದೆ, ಹೀನಾಯವಾಗಿ ನಿಂದಿಸಿ ನುಡಿಯದೆ, ಯಾರಿಗೂ ಕೇಡನ್ನು ಬಯಸದೆ ಹರಿಪಾದಸೇವೆ ಮಾಡಿ

ಸೇರುವುದಿಹಪರಗತಿ ನಾರಾಯಣ
ನಾರಾಧನೆಯೊಳೆಲ್ಲರಿಗೆ
ಆರಯ್ಯೆ ಸಕಲ ಸತ್ಕರ್ಮಂಗಳಚ್ಯುತ
ನಾರಾಧನೆಯೆನಿಸುವುವು ೮

ಇದನಾಚರಿಸುವುದಿದ[೧]ನುಳಿ[೧]ದಿರ್ಪುದೆಂ
ಬುದನಾರೈದು ಶಾಸ್ತ್ರದೊಳು
ಎದೆಗೊಳುವಂತೆ ಪೇಳುವ ಪಿರಿಯರ ದಿವ್ಯ
ಪದಸೇವೆಗೈದು ಬಾಳುವುದು ೯

ಇದನಾಚರಿಸಿದೊಡೀ ಫಲವಪ್ಪುದೆಂ
ಬುದು ಕಾಮ್ಯಕರ್ಮವೆನಿಪುದು
ಮುದದಿಂದ ಮುಕುತಿಯನೆಳಸುವ ಕೋ
ವಿದರ ಹಂಬಲನು ಬಿಟ್ಟಹುದು ೧೦

ಆವುದನೆಸಗದಿರ್ದೊಡೆ ಪಾಪವಾ ಕರ್ಮ
ಭಾವಿಸೆ ನಿತ್ಯವೆನಿಪುದು
ಆವ ವಿಧದೊಳಾದೊಡಮಾ ಕರ್ಮವ
ನಾವಗಮಾಚರಿಸುವುದು ೧೧

ಮೋಕ್ಷವನ್ನು ಪಡೆಯಬೇಕು. ೮. ನಾರಾಯಣನ ಆರಾಧನೆಯಿಂದ ಎಲ್ಲರಿಗೆ ಇಹ ಲೋಕದ ಪರಲೋಕದ ಸೌಖ್ಯ ಸಾಧ್ಯ. ಯೋಚಿಸಿ ನೋಡಿದರೆ ಸಮಸ್ತ ಶುಭಕರ್ಮ ಗಳ ಆಚರಣೆಯೂ ಅಚ್ಯುತನ ಪೂಜೆಯೇ ಎನ್ನಿಸಿಕೊಳ್ಳುತ್ತದೆ. ೯. ಈ ಕಾರ್ಯಗಳನ್ನು ಮಾಡಬೇಕು, ಇವುಗಳನ್ನು ಬಿಡಬೇಕು ಎಂಬುದನ್ನು ಶಾಸ್ತ್ರ ಸಹಾಯದಿಂದ, ವಿವೇಕ ದಿಂದ ಅರಿತು ಹೇಳುವ ಹಿರಿಯರ ಪೂಜ್ಯಪಾದಗಳನ್ನು ಸೇವಿಸಿ ಬದುಕಬೇಕು. ೧೦. ಈ ಕರ್ಮವನ್ನು ಆಚರಿಸಿದರೆ ಇಂಥ ಫಲ ಬರುತ್ತದೆ ಎಂದು ಆಶಿಸಿ ನಡೆಯುವುದು ಕಾಮ್ಯಕರ್ಮ. ಆದರೆ ಮುಕ್ತಿಯನ್ನು ಬಯಸುವವರು ಇಂಥ ಫಲಾಪೇಕ್ಷೆಯನ್ನು ಬಿಡು ವುದು ಯೋಗ್ಯ. ೧೧. ಯಾವ ಕರ್ಮವನ್ನು ಮಾಡದಿದ್ದರೆ ಪಾಪ ಬರುವುದೋ ಆ ಕರ್ಮ ನಿತ್ಯಕರ್ಮವೆನಿಸುತ್ತದೆ.[೧] ಯಾವ ರೀತಿಯಲ್ಲಾದರೂ ಆ ಕರ್ಮವನ್ನು ಸದಾ

---

೧. (ಗ) ನರಿ.

೧. ಉದಾ - ಸಂಧ್ಯಾವಂದನೆ

ಈ ನಿಮಿತ್ತದೊಳಿದನೆಸಗುವುದೆಂಬುದು
ತಾನೈಸೆ ನೈಮಿತ್ತಕರ್ಮ
ಆ ನಿಮಿತ್ತದೊಳಾಚರಿಸುವುದೆಲ್ಲರು
ಮಾ ನೈಮಿತ್ತಕರ್ಮವನು ೧೨

ಇಂತು ಮುಕ್ತಿಯನೆಳಸುವ ಕಾಮ್ಯವನುಳಿ
ದಂತರಂಗದ ಶುದ್ಧಿಯೊಳು
ಚಿಂತೆಗೊಳದೆ ನಿತ್ಯ ನೈಮಿತ್ತಕರ್ಮವ
ಸಂತಸದೊಡನೆಸಗುವುದು ೧೩

ಇದು ಜಗದೀಶ್ವರನಾಜ್ಞೆಯೆನಗೆ ತಾ
ನಿದನಾಚರಿಸಬೇಕೆಂದು
ಮುದದೊಡನೊಡರಿಪರಿಗೆ ಮೋಸವಿಲ್ಲೆಂ
ಬುದನರಿವುದು ಗೀತೆಯೊಳು ೧೪

*ಶ್ಲೋ॥* ನೇಹಾಭಿಕ್ರಮ ನಾಶೋऽಸ್ತಿ
ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ
ತ್ರಾಯತೇ ಮಹತೋ ಭಯಾತ್ ॥

ಭಗವದ್ಗೀತಾ : ಅಧ್ಯಾಯ ೨, ಶ್ಲೋಕ ೪೦

ಆಚರಿಸಲೇಬೇಕು. ೧೨. ಈ ಕಾರಣಕ್ಕಾಗಿ ಈ ಕರ್ಮವನ್ನು ಮಾಡಬೇಕು ಎನ್ನುವುದು ನಿಜವಾಗಿ ನಿಮಿತ್ತಕರ್ಮ. ಎಲ್ಲರೂ ಈ ನೈಮಿತ್ತಕರ್ಮವನ್ನು ಆ ನಿಮಿತ್ತಕ್ಕಾಗಿಯೇ ಆಚರಿಸಬೇಕು.[೨] ೧೩. ಹೀಗೆ ಮುಕ್ತಿಯನ್ನು ಬಯಸುವವರು ಅಪೇಕ್ಷೆಯನ್ನು ಬಿಟ್ಟು ಅಂತರಂಗಶುದ್ಧಿಯಿಂದ, ಚಿಂತೆಯನ್ನು ತ್ಯಜಿಸಿ ನಿತ್ಯವಾದ ನೈಮಿತ್ಯಕ ಕರ್ಮಗಳನ್ನು ಹರ್ಷದಿಂದ ಆಚರಿಸಬೇಕು. ೧೪. ಇದು ಜಗದೊಡೆಯನ ಅಪ್ಪಣೆ. ತಾನು ಇದನ್ನು ಆಚರಿಸಬೇಕು ಎಂದು ಆನಂದದಿಂದ ಕರ್ಮಾಚರಣೆಯಲ್ಲಿ ತೊಡಗುವವರಿಗೆ ವಿಪತ್ತು ಇಲ್ಲ ಎಂದು ಗೀತೆ ಹೇಳುತ್ತದೆ.

ಈ ಕರ್ಮ ಯೋಗದ ಆರಂಭವು ನಿಷ್ಫಲವಾಗದು
ವಿಘ್ನವು ಇಲ್ಲ
ಈ ಧರ್ಮದ ಅಲ್ಪಾಚರಣೆಯೂ
ಮಹಾಭಯದಿಂದ ರಕ್ಷಿಸುತ್ತದೆ. ಭಗವದ್ಗೀತಾ, ಅಧ್ಯಾಯ ೨. ಶ್ಲೋಕ ೪೦.

---

೨. ಉದಾ - ಗ್ರಹಣ ನಿಮಿತ್ತ ಸ್ನಾನ.

ಈಯೆಸಕದೊಳಿರೆ ಶೂದ್ರರಾದೊಡಮಾ
ಸ್ತ್ರೀಯರಾದೊಡಮೇನವರು
ಆ ಯೋಗಿಗಳಡರುವ ಪರಗತಿಗೆ ತಾ
ವಾಯಾಸವಿಲ್ಲದೇರುವರು ೧೫

*ಇಂತಪ್ಪುದಕ್ಕಂ ಗೀತಾವಚನಂ :*

ಶ್ಲೋ|| ಸ್ತ್ರಿಯೋವೈಶ್ಯಾಸ್ತಥಾ ಶೂದ್ರಾ
೨ಸ್ತೇಽಪಿಯಾಂತಿ ಪರಾಂಗತಿಮ್[೨] ||

ಭಗವದ್ಗೀತಾ · ಅಧ್ಯಾಯ ೯, ಶ್ಲೋಕ ೩೨

ಶುಚಿಯಾಗಿರೆ ದೇವತೆಗಳು ಸಲಹುವರು
ಶುಚಿಯನು ಪಿತೃಗಳೋವುವರು
ಶುಚಿಗಂಜುವುವು ಪ್ರೇತ ಭೂತಗಳದರಿಂದ
ಶುಚಿಯಪ್ಪುದೆಲ್ಲ ವೇಳೆಯೊಳು ೧೬

ಪಿರಿಯರ [೨]ನಿಟ್ಟಿಸಿದೊಡನೆ[೨] ಪೋಪುದು ಭೀತಿ
ಪರಿದೋಡುವುವು ಪಾಪಗಳು
ಇರದದರಿಂದ ಶ್ರೀ ಹರಿಶರಣರ ದಿವ್ಯ
ಚರಣದರ್ಶನವೆಸಗುವುದು ೧೭

೧೫. ಈ ಕಾರ್ಯದಲ್ಲಿದ್ದರೆ ಶೂದ್ರರಾದರೂ ಸ್ತ್ರೀಯರಾದರೂ ಸಹ ಯೋಗಿಗಳು ಪಡೆಯುವ ಪರಗತಿಯನ್ನು ಆಯಾಸವಿಲ್ಲದೆ ಪಡೆಯುತ್ತಾರೆ.

ಸ್ತ್ರೀಯರೂ ವೈಶ್ಯರೂ ಶೂದ್ರರೂ (ನನ್ನನ್ನು ಆಶ್ರಯಿಸಿ)
ಪರಮ ಗತಿಯನ್ನು ಪಡೆಯುವರು. ಭಗವದ್ಗೀತಾ - ೯, ಶ್ಲೋಕ ೩೨

೧೬. ಶುದ್ಧವಾದ ನಡತೆಯುಳ್ಳವರಾದರೆ ಅವರನ್ನು ದೇವತೆಗಳು ಕಾಪಾಡುತ್ತಾರೆ. ಶುಚಿತ್ವವನ್ನು ಪಿತೃದೇವತೆಗಳು ಪ್ರೀತಿಸುತ್ತಾರೆ. ಶುಚಿತ್ವಕ್ಕೆ ಭೂತಪ್ರೇತಗಳು ಹೆದರುತ್ತವೆ. ಆದ್ದರಿಂದ ಎಲ್ಲ ಕಾಲದಲ್ಲಿ ಶುಚಿಯಾಗಿಯೇ ಇರಬೇಕು. ೧೭. ದೊಡ್ಡವರನ್ನು ನೋಡಿದರೆ ಭಯ ಹೊರಟುಹೋಗುತ್ತದೆ, ಪಾಪಗಳು ಓಡಿಹೋಗುತ್ತವೆ. ಆದ್ದರಿಂದ ಬಿಡದೆ ಶ್ರೀಹರಿಭಕ್ತರ ದಿವ್ಯಪಾದಗಳ ಸಂದರ್ಶನವನ್ನು ಕೈಕೊಳ್ಳಬೇಕು.

---

೨. (ಖ) ಪ್ರತಿಯಲ್ಲಿ ಈ ಕೆಳಗಿನ ಪಙ್ತಿಯೂ ಇದೆ :

ಕಿಂಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ

೩. (ಕ, ಗ) ದರ್ಶನದಿಂದ

ಪರಮ ವಿಶ್ವಾಸವೆರಸಿ ವಿಷ್ಣು ವೈಷ್ಣವ
ಚರಣತೀರ್ಥವ ಸೇವಿಸಿದೊಡೆ
ಪರಿದೋಡುವುವು ಸಕಲ ಪಾಪಂಗಳು
ಪರಮಪದವಿ ಬಸವಹುದು ೧೮

ತಿಳಿಯೆ ಮಾನುಷಲೋಕದಿಂದಾ ಜವನೂರ
ಬಳಿಗೈದುವ ಪೆರ್ಬಟ್ಟೆ
ಉಳಿದೆಂಬತ್ತೆಂಟು ಸಾಸಿರ ಗಾವುದ
ದಳತೆಯ ನೀಟವೆನಿಪುದು ೧೯

ಊರು ಕೇರಿಗಳಿಲ್ಲ ಒರ್ವರ ನೆರವಿಲ್ಲ
ನೀರು ನೆಳಲು ತಾನಿಲ್ಲ
ಸೇರಿ ನಿಲುವದೊಂದು ಠಾವಿಲ್ಲವೆನಲಾ
ದಾರಿಯನೇವೇಳುವುದು ೨೦

ಪುರಿದಂತೆ ಬೇವುರಿ ಮಳಲ ರಾಶಿಗಳಿಂದ
ಹರಹಿದ ಮುಳ್ಳುಗಳಿಂದ
ಪರಿಪರಿ ಗೋರುಕಲ್ಲುಗಳಿಂದ ಪಜ್ಜೆಯ
ನುರಿಗೊಳಿಸುವುದೊಡನೊಡನೆ ೨೧

೧೮. ಅತ್ಯಂತ ಶ್ರದ್ಧೆಯಿಂದ ವಿಷ್ಣುವಿನ, ವಿಷ್ಣುಭಕ್ತರ ಪಾದತೀರ್ಥವನ್ನು ಸೇವಿಸಿದರೆ ಸಮಸ್ತ ಪಾಪಗಳೂ ಪರಿಹಾರವಾಗಿ ಪರಮಪದವಿ ಕೈವಶವಾಗುತ್ತದೆ. ೧೯. ವಿಚಾರಿಸಿದರೆ ಮನುಷ್ಯಲೋಕದಿಂದ ಯಮನ ಊರಿಗೆ ಹೋಗುವ ಹೆದ್ದಾರಿ ಎಂಬತ್ತೆಂಟು ಸಾವಿರ ಗಾವುದ ಉದ್ದವಿದೆ. ೨೦. ದಾರಿಯಲ್ಲಿ ಊರಿಲ್ಲ, ಕೇರಿಯಿಲ್ಲ, ಒಬ್ಬರ ಸಹಾಯವಿಲ್ಲ, ನೀರು ನೆಳಲೂ ಇಲ್ಲ, ಒಂದು ಕಡೆ ಸೇರಿ ನಿಲ್ಲಲು ಒಂದು ನಿಲ್ದಾಣವಿಲ್ಲ, ಎಂದ ಮೇಲೆ ಆ ದಾರಿಯ ವೈಚಿತ್ರ್ಯವನ್ನು ಏನೆಂದು ಹೇಳುವುದು ! ೨೧. ಬಾಣಲೆಯಲ್ಲಿ ಹಾಕಿ ಹುರಿದಂತೆ ಬೇಯುವ ಉರಿಯ ಮಳಲ ರಾಶಿಗಳು, ಹರಡಿದ ಮುಳ್ಳುಗಳು, ನಾನಾ ಬಗೆಯ ಗೋರುಕಲ್ಲುಗಳು - ಇವುಗಳಿಂದ ಇಟ್ಟ ಹೆಜ್ಜೆ ಉರಿಯುತ್ತದೆ. ಮುನ್ನಡೆಯಲು ಕಷ್ಟವಾಗುತ್ತದೆ.

ಆರಯ್ಯೆ ದಾನವೀಯದ ಪಾಪಗಳೀ
ದಾರಿವಿಡಿದು ನಡೆತಹರು
ಭೂರಿದಾನಗಳಿತ್ತ ಪುಣ್ಯಪುರುಷರೀ
ದಾರಿಯೊಳಿಡರಡಿಗಳನು ೨೨

ಪೊಡವಿಯ ಪಾಸಿಕಗಳನುಂಬ
ಕುಡಿನೀರ ತುರು ಕುದುರೆಗಳ
ಉಡೆಗಳನೊಳ್ಮಣಿಗಳನೊಲಿದೀವುದು
ಪಡೆವುದು ಪರಮಗತಿಗಳನು ೨೩

ಅಲಸದೆ ಮುಕ್ತಿಯನಾಸೆವಡುವರನ್ಯ
ಫಲವ ಬಯಸಿ ಬಣ್ಣಗೆಡದೆ
ನೆಲೆಗೊಂಡ ನಿಜಧರ್ಮದ ನೇಮವಳಿಯದೆ
ಪಲವು ದಾನವ ಪಣ್ಣುವುದು ೨೪

ತಾಳಿಗೆಯೊಣಗದ ಮುನ್ನಮೆ ನಾಲಗೆ
ಬೀಳದ ಮುನ್ನಮೆ ಬೇಗ
ಪೇಳುವುದಂಬುಜಾಕ್ಷನ ಪೆಸರುಗಳನು
ಪೇಳಲರಿಯದೊಡಾಲಿಪುದು ೨೫

೨೨. ವಿಚಾರಮಾಡಿ ನೋಡಲು, ದಾನ ಮಾಡದ ಪಾಪಿಗಳು ಈ ರಸ್ತೆ ಹಿಡಿದು ನಡೆದುಬರುತ್ತಾರೆ. ದಾನಮಾಡಿದ ಪುಣ್ಯಪುರುಷರು ಈ ಮಾರ್ಗದಲ್ಲಿ ಹೆಜ್ಜೆಯಿಡುವುದಿಲ್ಲ. ೨೩. ಭೂಮಿಯನ್ನು, ಹಾಸಿಗೆಗಳನ್ನು, ಊಟಗಳನ್ನು, ಕುಡಿಯುವ ನೀರನ್ನು, ಹಸುಗಳನ್ನು, ಕುದುರೆಗಳನ್ನು, ವಸ್ತ್ರಗಳನ್ನು, ಒಳ್ಳೆಯ ರತ್ನಗಳನ್ನು ಪ್ರೀತಿಯಿಂದ ದಾನಮಾಡಿ ಪರಮಗತಿಯನ್ನು ಪಡೆಯಬೇಕು. ೨೪. ಮುಕ್ತಿಗೆ ಆಸೆಪಡುವವರು ಇತರ ಫಲಗಳನ್ನು ಆಶಿಸಿ ಬಣ್ಣಗೆಡದೆ, ಸ್ಥಿರವಾಗಿ ನಿಂತ ಸ್ವಧರ್ಮವನ್ನು ನಿಯಮದಂತೆ ಪಾಲಿಸಿ ಹಲವಾರು ದಾನಗಳನ್ನು ಮಾಡಬೇಕು. ೨೫. ಗಂಟಲು ಒಣಗುವುದಕ್ಕೆ ಮುಂಚೆ, ನಾಲಗೆ ಬಿದ್ದುಹೋಗುವುದಕ್ಕೆ ಮುಂಚೆ ಕಮಲಾಕ್ಷನ ನಾಮಗಳನ್ನು ಹೇಳಬೇಕು, ಹೇಳುವುದಕ್ಕಾಗದಿದ್ದರೆ ಕೇಳಲಾದರೂ ಬೇಕು.

ಶ್ರೀವಿಷ್ಣುಭಕ್ತಿಯಿಂದತಿವೇಗದೊಳು ದುಃ
ಖಾವಳಿಯಳಿವುದೆಂಬುದಕೆ
ಭಾವಿಸೆ ಭಾಗವತದೊಳೊಂದು ಕಥೆಯುಂ
ಟಾ ವಿಧವನು ಬಣ್ಣಿಪೆನು ೨೬

ತಕ್ಷಕನಿಂದ ತನಗೆ ಅಳಿವಪ್ಪುದಿ
ನ್ನಕ್ಷಯಗತಿಗೊಂಬೆನೆಂದು
ಆ ಕ್ಷಣದೊಳು ಶುಕಮುನಿಯಡಿಗೆರಗಿ ಪ
ರೀಕ್ಷಿತನಿಂತು ಕೇಳಿದನು ೨೭

ಸಾವಡಸಿದ ಸಮಯದೊಳು ಸದ್ಗತಿಗಾಗಿ
ಯಾವುದನೊಲಿದಾಲಿಪುದು
ಆವುದನೋದುವುದಾವುದನೊಡರಿಪು
ದಾವುದನಿರದೆ ನೆನೆವುದು ೨೮

ಇಂತು ನುಡಿದ ಪರೀಕ್ಷಿತರಾಯಗೆ ಮಿಗೆ
ಸಂತಸವನು ಸಮನಿಸುತ
ತಾಂ ತಿಳಿದಖಿಲಶಾಸ್ತ್ರದ ತತ್ವಮನೋ
ರಂತರುಹಿದನಾ ಯೋಗಿ ೨೯

೨೬. ಶ್ರೀವಿಷ್ಣುಭಕ್ತಿಯಿಂದ ಅತ್ಯಂತ ಶೀಘ್ರವಾಗಿ ದುಃಖಸಮೂಹ ನಾಶವಾಗುತ್ತದೆ ಎಂಬುದಕ್ಕೆ ಭಾಗವತದಲ್ಲಿ ಒಂದು ಕಥೆಯಿದೆ. ಅದರ ವಿಧಾನವನ್ನು ವರ್ಣಿಸುತ್ತೇನೆ. ೨೭. "ತಕ್ಷಕರಾಜನಿಂದ ತನಗೆ ಮೃತ್ಯು ಸಂಭವಿಸುತ್ತದೆ. ಆದ್ದರಿಂದ ಕೂಡಲೆ ನಾನು ಕ್ಷಯರಹಿತವಾದ (ಗತಿ) ಲೋಕವನ್ನು ಪಡೆಯಬೇಕು" ಎಂದು ಆ ಕ್ಷಣದಲ್ಲಿ ಪರೀಕ್ಷಿತ ಮಹಾರಾಜನು ಶುಕಮುನಿಯ ಪಾದಗಳಿಗೆ ನಮಸ್ಕಾರಮಾಡಿ ಹೀಗೆ ಕೇಳಿದನು. ೨೮. "ಸಾವು ಸನ್ನಿಹಿತವಾದಾಗ ಸದ್ಗತಿಯನ್ನು ಹೊಂದಲು ಯಾವುದನ್ನು ಶ್ರದ್ಧೆಯಿಂದ ಕೇಳಬೇಕು ? ಏನನ್ನು ಓದಬೇಕು ? ಯಾವ ಕೆಲಸವನ್ನು ಮಾಡಬೇಕು ? ಯಾವುದನ್ನು ಕುರಿತು ಧ್ಯಾನಿಸಬೇಕು ?" ೨೯. ಹೀಗೆ ಕೇಳಿದ ಪರೀಕ್ಷಿತನಿಗೆ ಸಂತೋಷವನ್ನುಂಟು ಮಾಡುತ್ತ ಶುಕಯೋಗಿ, ತಾನು ತಿಳಿದ ಅಖಿಳಶಾಸ್ತ್ರದ ತತ್ತ್ವವನ್ನು ಎಡೆಬಿಡದೆ

ಅರಸ ಕೇಳಾಪತ್ತಡಸಿದ ವೇಳೆಗೆ
ಹರಿಕಥೆಗಳನೆ ಕೇಳುವುದು
ಹರಿನಾಮಂಗಳನೊಲಿದೋದುವುದು ಶ್ರೀ
ಹರಿಪದಂಗಳನೆ ನೆನೆವುದು ೩೦

ಹರಿಪಾದಪದ್ಮದ ಸೇವೆಯಿಲ್ಲದೆ ಪಲ
ವರಿಸಮಿದ್ದೊಡೆ ಫಲವೇನು
ಮುರವೈರಿಯ ನೆನೆದೊಂದು ಮುಹೂರ್ತಕೆ
ಪರಗತಿ ಬಯಸಿದಂತಹುದು ೩೧

ಅಂದು ಖಟ್ವಾಂಗನೆಂಬರಸು ತಾನಳಿವುದ
ಕೊಂದು ಮುಹೂರ್ತದೊಳರಿತು
ಕುಂದದೆ ಭಜಿಸಿ ಮುಕುಂದನ ಚರಣವ
ಸಂದನು ಪರಮಪದವಿಗೆ ೩೨

ಏಳೆಲೆ ಭರತವಂಶಾಗ್ರಣಿ ಬೇಗದೊ
ಳೇಳು ಭಜಿಸು ಮಾಧವನ
ಏಳು ದಿವಸದಾಯುವಿರ್ಪುದು ನಿನಗಿ
ನ್ನಾಳೋಚನೆಯೇತಕಿದಕೆ ೩೩

ಹೇಳಿದನು. ೩೦. "ಅರಸ ಕೇಳು, ಆಪತ್ತು ಒದಗಿದಾಗ ಹರಿಕಥೆಗಳನ್ನು ಕೇಳಬೇಕು, ಹರಿನಾಮವನ್ನು ಶ್ರದ್ಧೆಯಿಂದ ಓದಬೇಕು, ಶ್ರೀಹರಿಯ ಪಾದಗಳನ್ನು ನೆನೆಯಬೇಕು. ೩೧. ಹರಿಯ ಪಾದಕಮಲಗಳ ಸೇವೆಮಾಡದೆ ಹಲವಾರು ವರ್ಷಗಳನ್ನು ಕಳೆದರೆ ಏನೂ ಫಲ ದೊರಕುವುದಿಲ್ಲ. ಮುರಾರಿಯನ್ನು ನೆನೆದರೆ ಒಂದು ಮುಹೂರ್ತದಲ್ಲಿ ಉತ್ತಮಗತಿಯನ್ನು ಬಯಸಿದಂತೆಯೇ ಆಗುತ್ತದೆ. ೩೨. ಹಿಂದೆ ಖಟ್ವಾಂಗ ಎಂಬ ರಾಜನು ತಾನು ಸಾಯುವುದಕ್ಕೆ ಒಂದು ಮುಹೂರ್ತ ಮುಂಚೆ ಮುಕುಂದನ ಚರಣ ಕಮಲವನ್ನು ಭಜಿಸಿ ಪರಮಪದವಿಯನ್ನು ಪಡೆದನು. ೩೩. ಎಲೆ ಭರತವಂಶ ಲಲಾಮ, ಏಳು, ಬೇಗ ಸಿದ್ಧನಾಗು, ಮಾಧವನನ್ನು ಭಜಿಸು, ನಿನಗೆ ಇನ್ನು ಏಳೇ ದಿನ ಇರುವುದು ಆಯುಷ್ಯ. ಇದಕ್ಕೆ ಏಕೆ ಯೋಚಿಸುತ್ತೀಯೆ".

ಈ ವಿಧದೊಳು ಪೇಳಿದ ಶುಕಮುನಿಗೆ ಪ
ದಾವನತಿಯನಾಚರಿಸಿ
ಭಾವಶುದ್ಧಿಯೊಳು ಭಾಗವತವ ಕೇಳಿಯಂ
ದಾ ವಿಷ್ಣುಪದವನ್ನೆದಿದನು ೩೪

ಆರಯ್ಯೆ ವಿಷ್ಣುಪುರಾಣ ರಾಮಾಯಣ
ಭಾರತ ಭಾಗವತಗಳ
ಆರು ಪಿರಿಯರಿಂದಾಲಿಪರವರಿಗೆ
ಸೇರುವುವಖಿಳ ಸಿದ್ಧಿಗಳು ೩೫

ಇದಕೆ ಸಮ್ಮತಿ ವಚನಂಗಳು ಪಲವುಂ
ಟದರೊಳೊಂದೆರಡನೋದುವೆನು
ಅದರರ್ಥಂಗಳನೆಲ್ಲರುಮರಿವಂತೆ
ಪದರಚನೆಯೊಳು ಬಣ್ಣಿಪೆನು ೩೬

*ಶ್ರೀ ಭಾಗವತೇ ಪ್ರಥಮಸ್ಕಂದೇ, ಪ್ರಥಮೋಧ್ಯಾಯೇ*

*ಶ್ಲೋ॥* ಧರ್ಮಃ ಪ್ರೋಜ್ಝಿತ ಕೈತವೋತ್ರ
ಪರಮೋ ನಿರ್ಮತ್ಸರಾಣಾಂ ಸತಾಂ ।
ವೇದ್ಯಂ ವಾಸ್ತವಮತ್ರ ವಸ್ತು
ಶಿವದಂ ತಾಪತ್ರಯೋನ್ಮೂಲನಂ ॥

ಶ್ರೀಮದ್ಭಾಗವತೇ ಮಹಾಮುನಿಕೃತೇ
ಕಿಂ ವಾ ಪರೈರೀಶ್ವರಃ ।
ಸದ್ಯೋ ಹೃದ್ಯವರುಧ್ಯತೇತ್ರ
ಕೃತಿಭಿಃ ಶುಶ್ರೂಷುಭಿಸ್ತತ್‌ಕ್ಷಣಾತ್ ॥

೩೪. ಈ ರೀತಿಯಲ್ಲಿ ಹೇಳಿದ ಶುಕಮುನಿಯ ಪಾದಗಳಿಗೆ ಪರೀಕ್ಷಿತನು ನಮಸ್ಕಾರ ಮಾಡಿ, ಶುದ್ಧಭಾವದಿಂದ ಭಾಗವತಪುರಾಣವನ್ನು ಕೇಳಿ ಅವನು ವಿಷ್ಣುಪದವನ್ನು ಪಡೆದನು. ೩೫. ಆದ್ದರಿಂದ ಯಾರು ವಿಷ್ಣುಪುರಾಣ, ರಾಮಾಯಣ, ಭಾರತ, ಭಾಗವತಗಳನ್ನು ಹಿರಿಯರಿಂದ ಆಲಿಸುವರೋ ಅವರಿಗೆ ಸಮಸ್ತ ಸಿದ್ಧಿಗಳು ಪ್ರಾಪ್ತ ವಾಗುತ್ತವೆ. ೩೬. ಇದಕ್ಕೆ ಆಧಾರವಾಗಿ ಅನೇಕ ವಚನಗಳಿವೆ. ಅದರಲ್ಲಿ ಒಂದೆರಡನ್ನು ಹೇಳುತ್ತೇನೆ. ಅದರ ಅರ್ಥವನ್ನು ಎಲ್ಲರೂ ತಿಳಿಯುವಂತೆ ಸುಲಭ ಶೈಲಿಯಲ್ಲಿ ಬಣ್ಣಿಸುತ್ತೇನೆ. ಶ್ರೀ ಭಾಗವತದ ಪ್ರಥಮ ಸ್ಕಂದದ ಮೊದಲ ಅಧ್ಯಾಯದಲ್ಲಿ ಮಹರ್ಷಿ ಕೃತವಾದ ಈ ಭಾಗವತದಲ್ಲಿ ನಿರ್ವ್ಯಾಜವಾದ ಪರಮ ಧರ್ಮವು ಪ್ರತಿಪಾದಿತ ವಾಗಿದೆ. ಮಾತ್ಸರ್ಯವಿಲ್ಲದ ಸಜ್ಜನರಿಗೆ ವೇದ್ಯವಾದ ತತ್ತ್ವವು ಇದೆ. ಇದು ತಾಪತ್ರಯಹಾರಿ. ಕಥಾವಸ್ತು ಸುಖಕರವಾದುದು. ಹೆಚ್ಚೇನು ? ಶುಶ್ರೂಷುಗಳು ಕೂಡಲೆ ಧನ್ಯರಾಗುತ್ತಾರೆ. ಅವರ ಹೃದಯದಲ್ಲಿ ಈಶ್ವರನು ನೆಲೆಸಿರುತ್ತಾನೆ.

ವೇದವ್ಯಾಸನಣುಗನಾ ಶುಕಮುನಿ
ಯಾದರದಿಂದನುಗ್ರೈದ
ವೇದ ತತ್ವಾರ್ಥಮೆನಿಪ ಭಾಗವತವ
ನಾದರದಿಂದಾಲಿಪುದು ೩೭

ಮದ ಮತ್ಸರಂಗಳಡಗಿದ ಮಹಾತ್ಮರ
ಸದಮಳ ಧರ್ಮವಿದರೊಳು
ಇದು ತಾಪತ್ರಯಹರವಿದನಾಲಿಪ
ರೆದೆಯೊಳು ಹರಿ ನೆಲಸುವನು ೩೮

*ಶ್ರೀ ವಿಷ್ಣು ಪುರಾಣೇ ಷಷ್ಠೇ ಅಂಶೇ ಚರಮೇ ಅಧ್ಯಾಯೇ*

*ಶ್ಲೋ*॥ ಪುರಾಣಂ ವೈಷ್ಣವಂ ಚೈತತ್
ಸರ್ವಕಿಲ್ಬಿಷನಾಶನಂ ।
ವಿಶಿಷ್ಟಂ ಸರ್ವಶಾಸ್ತ್ರೇಭ್ಯಃ
ಪುರುಷಾರ್ಥೋಪಪಾದಕಂ ॥

ಯತ್ರಾದೌ ಭಗವಾನ್ ಚರಾಚರ
ಗುರುರ್ಮಧ್ಯೇ ತಥಾಂತೇ ಚ ಸಃ ।
ಬ್ರಹ್ಮಜ್ಞಾನಮಯೋಽಚ್ಯುತೋಽಖಿಲ
ಜಗನ್ಮಧ್ಯಾಂತ ಸರ್ಗಪ್ರಭುಃ ॥

೩೭. ವೇದವ್ಯಾಸನ ಮಗನಾದ ಆ ಶುಕಮುನಿ ಆದರದಿಂದ ಹೇಳಿದ ವೇದಗಳ ತತ್ತ್ವವನ್ನು ಪ್ರತಿಪಾದಿಸುವ ಭಾಗವತವನ್ನು ಶ್ರದ್ಧೆಯಿಂದ ಕೇಳಬೇಕು. ೩೮. ಮದ ಮತ್ಸರಾದಿ ಷಡ್ವರ್ಗಗಳಿಂದ ದೂರರಾದ ಮಹಾತ್ಮರ ಪರಿಶುದ್ಧರಾದ ಧರ್ಮತತ್ತ್ವ ಇದರಲ್ಲಿ ಅಡಗಿದೆ. ಇದು ಮನುಷ್ಯನ ತಾಪತ್ರಯವನ್ನು ಕಳೆಯುತ್ತದೆ. ಇದನ್ನು ಕೇಳಿದವರ ಹೃದಯದಲ್ಲಿ ಶ್ರೀಹರಿ ನೆಲಸುತ್ತಾನೆ. ಶ್ರೀ ವಿಷ್ಣುಪುರಾಣದ ಆರನೆಯ ಅಂಶದ ಕೊನೆಯ ಅಧ್ಯಾಯದಲ್ಲಿ ಹೀಗೆ ಹೇಳಿದೆ : ಈ ವಿಷ್ಣುಪುರಾಣವು ಸಕಲ ಪಾಪ ಪರಿಹಾರಕವಾದುದು. ಪುರುಷಾರ್ಥವನ್ನು ಪ್ರತಿಪಾದಿಸುವ ಇದು ಎಲ್ಲ ಶಾಸ್ತ್ರಗಳಿಗಿಂತ ಅಧಿಕವಾದುದು. ಇದರ ಆದಿ ಮಧ್ಯ ಅಂತ್ಯಗಳಲ್ಲಿ ಚರಾಚರಗುರುವೂ ಬ್ರಹ್ಮಜ್ಞಾನಮಯನೂ ಅಖಿಲ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೂ ಆದ ಭಗವಾನ್ ಅಚ್ಯುತನು ನೆಲೆಸಿರುವನು. ಪವಿತ್ರವೂ ಶ್ರೇಷ್ಠನೂ ಆದ ಇದನ್ನು ಭಕ್ತಿಯಿಂದ

ತಚ್ಛೃಣ್ವನ್ಪುರುಷಃ ಪವಿತ್ರ
ಪರಮಂ ಭಕ್ತ್ಯಾ ಫಲನ್ಧಾರಯನ್ ।
ಪ್ರಾಪ್ನೋತ್ಯಸ್ತಿನತತ್ಸಮ
ಸ್ತ್ರೀಭುವನೇಷ್ವೇಕಾಂತಸಿದ್ಧಿರ್ಹರಿಃ ॥

ಇದನು ಶ್ರೀ ವಿಷ್ಣು ಪುರಾಣವೆಂಬರು ಮ
ತ್ತಿದರಿಂದ ಪಾಪ ಪರಿವುದು
ಇದು ಸರ್ವಶಾಸ್ತ್ರದೊಳುತ್ತಮವೆನಿಸುವು
ದಿದು ಸರ್ವಫಲವ ಸಾಧಿಪುದು ೩೯

ಆದಿ ಮಧ್ಯಾಂತರಹಿತನಚ್ಯುತನಿದ
ರಾದಿ ಮಧ್ಯಾಂತದೊಳಿಹನು
ಈ ದಿವ್ಯ ವಿಷ್ಣುಪುರಾಣವ ಕೇಳುವ
ರಾ ದೇವನಡಿಯ ಸೇರುವರು ೪೦

*ಶ್ರೀ ಮದ್ರಾಮಾಯಣೇ ಯುದ್ಧಕಾಂಡೇ ಚರಮಸ್ಸರ್ಗೇ*

*ಶ್ಲೋ॥* ರಾಮಾಯಣಮಿದಂ ಕೃತ್ಸ್ನಂ
ಶೃಣ್ವತಃ ಪಠತಸ್ಸದಾ ।
ಪ್ರೀಯತೇ ಸತತಂ ರಾಮ
ಸ್ಸಹಿವಿಷ್ಣುಸ್ಸನಾತನಃ ॥

ಪಠಿಸತಕ್ಕವನೂ ಕಲಿಯತಕ್ಕವನೂ ಆದ ಪುರುಷನಿಗೆ ತ್ರಿಭುವನದಲ್ಲಿ ಸಮನಾದವನು ಇನ್ನೊಬ್ಬನಿಲ್ಲ, ಅವನು ವಿಷ್ಣುಪದವನ್ನು ಸೇರುತ್ತಾನೆ. ೩೯. ಇದನ್ನು ವಿಷ್ಣುಪುರಾಣ ಎಂದೆನ್ನುತ್ತಾರೆ ಮತ್ತು ಇದರಿಂದ ಪಾಪ ಪರಿಹಾರವಾಗುವುದು. ಇದು ಸಮಸ್ತ ಶಾಸ್ತ್ರಗಳಲ್ಲಿ ಉತ್ತಮವಾದದ್ದು. ಇದರಿಂದ ಸರ್ವ ಫಲಗಳನ್ನು ಸಾಧಿಸಬೇಕು. ೪೦. ಆದಿ, ಮಧ್ಯ, ಅಂತ್ಯರಹಿತವಾದ ವಿಷ್ಣು ಇದರ ಆದಿ ಮಧ್ಯ ಅಂತ್ಯದಲ್ಲಿದ್ದಾನೆ. ಉತ್ತಮವೂ ಶ್ರೇಷ್ಠನೂ ಆದ ಈ ವಿಷ್ಣುಪುರಾಣವನ್ನು ಯೂರು ಕೇಳುತ್ತಾರೆಯೋ ಅವರು ಆ ಪರಮಾತ್ಮನ ಪಾದಸೌಖ್ಯವನ್ನು ಪಡೆಯುತ್ತಾರೆ. ಶ್ರೀ ಮದ್ರಾಮಾಯಣ ಯುದ್ಧಕಾಂಡದ ಕೊನೆಯ ಸರ್ಗದಲ್ಲಿ ಹೀಗೆ ಹೇಳಿದೆ : ಈ ರಾಮಾಯಣವನ್ನು ಯಾವಾಗಲೂ ಪೂರ್ತಿಯಾಗಿ ಕೇಳತಕ್ಕವನಿಗೆ ಪಠಿಸತಕ್ಕವನಿಗೆ ಶ್ರೀರಾಮನು ನಿರಂತರವಾಗಿ ಪ್ರಸನ್ನನಾಗುತ್ತಾನೆ. ರಾಮನೆಂದರೆ ಶಾಶ್ವತವಾದ ವಿಷ್ಣುವೇ ಸರಿ.

ಪಾಪಾನ್ಯಪಿ ಚಯಃ ಕೃತ್ವಾ
ಅಹನ್ಯಹನಿ ಮಾನವಃ
ಪಠತ್ಯೇಕಪಿಶ್ಲೋಕಂ
ಪಾಪಾತ್ಸಪರಿಮುಚ್ಯತೇ ॥

ಈ ರಾಮಾಯಣವೆಲ್ಲವನೆಡೆವಿಡ
ದಾರೈದು ತಿಳಿದೋದುವರನು
ಶ್ರೀರಾಮಚಂದ್ರನೊಲಿದು ಸಲಹುವನಾದಿ
ನಾರಾಯಣನವನೈಸೆ ೪೧

ಒಂದು ಸರ್ಗಮನೊಂದು ಪದ್ಯಮನಲ್ಲದೊ
ಡೊಂದು ಪಾದವನೋದಿದೊಡೆ
ಅಂದಂದಿನೊಳೆಸಗಿದ ಪಾಪಂಗಳಂ
ದಂದಿಗೆ ಪರಿಹರಿಸುವುವು ೪೨

*ಶ್ರೀ ಮಹಾಭಾರತೇ ಸ್ವರ್ಗಾರೋಹಣ ಪರ್ವಣಿ ಚರಮೇ ಅಧ್ಯಾಯೇ*

ಶ್ಲೋಕ॥ ಕಾರ್ಷ್ಣಂ ವೇದಮಿಮಂ ಸರ್ವಂ
ಶೃಣುಯಾದ್ಯಸ್ಸಮಾಹಿತಃ ।
ಬ್ರಹ್ಮಹತ್ಯಾ ಕೃತಂ ಪಾಪಂ
ತತ್‌ಕ್ಷಣಾದೇವ ನಶ್ಯತಿ ॥

ಯಾವನು ಪಾಪ ಕಾರ್ಯವನ್ನು ಮಾಡಿದ್ದರೂ ರಾಮಾಯಣದ ಒಂದು ಶ್ಲೋಕವನ್ನು ಪ್ರತಿದಿನವೂ ಪಠಿಸುತ್ತಿದ್ದರೆ ಆತನು ಪಾಪದಿಂದ ಬಿಡುಗಡೆಹೊಂದುತ್ತಾನೆ. ೪೧. ಈ ರಾಮಾಯಣ ಎಲ್ಲವನ್ನೂ ಅರ್ಥಮಾಡಿಕೊಂಡು ಒಂದೇ ಸಮನೆ, ಯಾರು ಓದು ತ್ತಾರೆಯೋ ಅಂಥವರನ್ನು ಶ್ರೀರಾಮಚಂದ್ರನು ಪ್ರೀತಿಯಿಂದ ಕಾಪಾಡುತ್ತಾನೆ. ಏಕೆಂದರೆ ಅವನೇ ಆದಿನಾರಾಯಣ. ೪೨. ಒಂದು ಸರ್ಗವನ್ನು, ಇಲ್ಲವೆ ಒಂದು ಪದ್ಯವನ್ನು ಅಥವಾ ಶ್ಲೋಕದ ಒಂದು ಪಾದವನ್ನು ಓದಿದರೆ ಅಂದಂದು ಮಾಡಿದ ಪಾಪಗಳು ಅಂದಂದೇ ಪರಿಹಾರವಾಗುತ್ತವೆ. ಶ್ರೀಮಹಾಭಾರತದ ಸ್ವರ್ಗಾರೋಹಣ ಪರ್ವದಲ್ಲಿ ಕೊನೆಯ ಅಧ್ಯಾಯ : ಕೃಷ್ಣದ್ವೈಪಾಯನರು ರಚಿಸಿದ ಈ ವೇದವೆಲ್ಲವನ್ನು ಯಾವನು ಸಮಾಹಿತನಾಗಿ ಕೇಳುವನೋ ಆತನ ಬ್ರಹ್ಮಹತ್ಯಾದೋಷವು ಆ ಕ್ಷಣದಲ್ಲಿಯೇ

ಅಹ್ನಾ ಯದೇನಃ ಕುರುತೇ
ಇಂದ್ರಿಯೈರ್ಮನಸಾ ಗಿರಾ ।
ಮಹಾಭಾರತಮಾಖ್ಯಾಯ
ಸರ್ವಪಾಪೈಃ ಪ್ರಮುಚ್ಯತೇ ॥

ವೇದವ್ಯಾಸನೊಲಿದು ಪೇಳಿದ ಪೊಸ
ವೇದವೆನಿಪ ಭಾರತವನು
ಓದಿದ ಮಾತ್ರದೊಳಳಿವುವು ಬ್ರಹ್ಮಹ
ತ್ಯಾದಿ ಮಹಾಪಾತಕಗಳು ೪೩

ನಡೆ ನುಡಿ ನೆನಹುಗಳಂದಂದಿಂದನೊ
ಳೊಡರಿಸುವುಗ್ರ ಪಾಪಗಳು
ಅಡಗುವುವಂದಂದಿಗೆ ಭಾರತದೊಂದು
ನುಡಿಯನೋದಿದ ಮಾತ್ರದೊಳು ೪೪

ಇಂತು ನಡೆವ ನಿತ್ಯ ನೈಮಿತ್ತಕರ್ಮ ಶ್ರೀ
ಕಾಂತನೂಳಿಗವೆಂದು ತಿಳಿದು
ಸಂತಸದಿಂದಾ[೪]ಚರಿಸೆ[೪] ಸತಿಯರಿಗೆ
ಚಿಂತಿತ ಫಲ ಸೇರುವುದು ೪೫

ನಾಶಹೊಂದುತ್ತದೆ. ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಯಾವ ಪಾಪವನ್ನು ಆಚರಿಸಿದ್ದರೂ ಮಹಾಭಾರತವನ್ನು ಪ್ರವಚನಮಾಡಿದರೆ ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ೪೩. ವೇದವ್ಯಾಸರು ಹೇಳಿದ ಹೊಸವೇದವೆಂದು ಖ್ಯಾತಿಪಡೆದ ಭಾರತವನ್ನು ಓದಿದ ಮಾತ್ರದಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳು ನಾಶವಾಗುವುವು. ೪೪. ನಡೆ, ನುಡಿ, ನೆನಪುಗಳಿಂದ ದಿನದಿನವೂ ಸಂಭವಿಸ ಬಹುದಾದ ಉಗ್ರಪಾಪಗಳು ಭಾರತದ ಒಂದು ನುಡಿ ಓದಿದ ಮಾತ್ರಕ್ಕೆ ನಾಶವಾಗುವುವು. ೪೫. ಹೀಗೆ ನಡೆಯುವ ನಿತ್ಯ ನೈಮಿತ್ತಿಕ ಕರ್ಮಗಳನ್ನು ಶ್ರೀಹರಿಯ ಸೇವೆಯೆಂದು ಭಾವಿಸಿ ಆನಂದದಿಂದ ಆಚರಿಸಿದರೆ ಸಾಧ್ವಿಯರಿಗೆ ಬಯಸಿದ ಫಲಗಳು

೪. (ಕ) ಚರಿಪ.

ಗುರುಮುಖದಿಂದ ರಹಸ್ಯತ್ರಯಾರ್ಥದ
ತಿರುಳನರಿತು ತೀವ್ರದೊಳು
ಪರಿಹರಿಪುದು ಮಂತ್ರಾಂತರ ದೇವತಾಂ
ತರ ಸಾಧನಂತರಂಗಳನು ೪೬

ಪಂಚಸಂಸ್ಕಾರಗಳನು ಪಡೆದೊಡನರ್ಥ
ಪಂಚಕತತ್ವಮನರಿತು
ಪಾಂಚಕಾಲಿಕ ಧರ್ಮವನೆಸಗುತ ನಿ
ಶ್ಚಂಚಲ ಚಿತ್ತದೊಳಿಹುದು ೪೭

ಇದು ಮಂತ್ರವಿದು ದೇವತೆಯಿದು ನಡತೆಯೆಂ
ಬುದನರಿತಂತರಂಗದೊಳು
ಮುದದೊಡನಿರ್ಪ ಮುಮುಕ್ಷುಗಳಿಗೆ ಮುಕ್ತಿ
ಪದವಿ ಕೈಬಸಮಾಗಿಹುದು ೪೮

ಪತಿಯೊಲವಕ್ಕೆ ಸತಿಯರೊಳು ಸತಿಯರು
ಪತಿಪಾದಭಕ್ತೆಯರಕ್ಕೆ
ಸತಿಯರ ಮೈಮೆ ಸಕಲ ಜಗದೊಳು ನಿಲ್ಕೆ
ಸತಿಧರ್ಮ ಶಾಶ್ವತಮಕ್ಕೆ ೪೯

ದೊರಕುವುವು. ೪೬. ಗುರುವಿನ ಮೂಲಕ ಮೂರು ರಹಸ್ಯಗಳನ್ನು (ಪ್ರಕೃತಿ, ಆತ್ಮ ಪರಮಾತ್ಮ[1]) ತಿಳಿದು ಮಂತ್ರಾಂತರ, ದೇವತಾಂತರ ಮತ್ತು ಸಾಧನಾಂತರಗಳನ್ನು ಪರಿಹಾರಮಾಡಿ ಕೊಳ್ಳಬೇಕು. ೪೭. ಪಂಚಸಂಸ್ಕಾರಗಳನ್ನು (ತಪ, ಪುಂಡ್ರ, ನಾಮ, ಮಂತ್ರ, ಯಾಗ) ಪಡೆದ ನಂತರ ಅರ್ಥಪಂಚಕದ (ಐದು ಉಪಾಯಗಳು : ೧. ಸ್ವಸ್ವರೂಪ ೨. ಪರಸ್ವರೂಪ, ೩. ಪುರುಷಾರ್ಥ ಸ್ವರೂಪ ೪. ಉಪಾಯ ಸ್ವರೂಪ (ವಿರೋಧಿ ಸ್ವರೂಪ) ತತ್ವವನ್ನು ತಿಳಿದುಕೊಂಡು ಪಾಂಚಕಾಲಿಕ (ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ ಮತ್ತು ಯೋಗ) ಧರ್ಮಗಳನ್ನು ಆಚರಿಸುತ್ತ, ನಿಶ್ಚಲವಾದ ಮನಸ್ಸಿನಿಂದ ಕೂಡಿರಬೇಕು. ೪೮. ಇದು ಮಂತ್ರ, ಇದು ದೇವತೆ, ಇದು ನಡತೆ ಎಂಬುದನ್ನು ಅಂತರಂಗದಲ್ಲಿ ತಿಳಿದುಕೊಂಡು, ಆನಂದದಲ್ಲಿರುವ ಮೋಕ್ಷಾಪೇಕ್ಷಿಗಳಿಗೆ ಮುಕ್ತಿಸ್ಥಾನ ಕೈವಶವಾಗಿಯೇ ಇರುತ್ತದೆ.

---

೧. ಪ್ರಕೃತಿ . ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಎಂಬ ಪಂಚಭೂತಗಳು (೨) ಆತ್ಮ-ಪರಮಾತ್ಮ ಅಂಶ. (೩) ಪರಮಾತ್ಮ ಜೀವಕ್ಕೆ ಒಡೆಯ.

ಉರ್ವೀಶರು ಧಾರ್ಮಿಕರಕ್ಕೆ ಜಗದೊಳು
ಪಾರ್ವರು ಪದುಳದೊಳಿರ್ಕೆ
ಒರ್ವರೊರ್ವರೊಳೊಡವೆರೆಗೆ ದಂಪತಿಗಳು
ಸರ್ವರು ಸೌಖ್ಯದೊಳಿರ್ಕೆ ೫೦

ಶ್ರೀವೇದಮಾರ್ಗ ಪ್ರತಿಷ್ಠಾಪನಾಚಾರ್ಯ
ನಾ ವೈಷ್ಣವಧರ್ಮಮೂರ್ತಿ
ಆವನುಭಯ ವೇದಾಂತಾಚಾರ್ಯನೆಂ
ಬೀ ವಿಧದೇಳ್ಗೆವೆತ್ತಿಹನು ೫೧

ಶ್ರೀ ಶುಕ ವೇದವ್ಯಾಸ ವಾಲ್ಮೀಕಿ ಪ
ರಾಶರರನು ಪಡಿಗೊಂಡು
ಶ್ರೀಶ"ಪದಾ"ಂಬುಜಭಕ್ತಿ ತತ್ವಜ್ಞಾನ
ರಾಶಿಯೆನಿಸಿ ರಾಜಿಪನು ೫೨

ಈ ಮಹಿಮೆಯೊಳಿಸೆವಳಸಿಂಗರಾರ್ಯನು
ದ್ದಾಮ ಕೃಪಾವೈಭವಕೆ
ಭೂಮಿಯೆನಿಸಿ ನೆಗಳಿದ ಮೈಮೆಯಿಂದಾ
ನೀ ಮಹಾಕೃತಿಯ ಪೇಳಿದೆನು ೫೩

೪೯. ಸಾಧ್ವಿಯರಲ್ಲಿ ಪತಿದೇವರ ಪ್ರೀತಿ ನೆಲಸಲಿ, ಸ್ತ್ರೀಯರು ಪತಿಪಾದದಲ್ಲಿ ಭಕ್ತಿಯುಳ್ಳವರಾಗಲಿ, ಪತಿವ್ರತೆಯರ ಮಹಿಮೆ ಸಮಸ್ತ ಜಗತ್ತಿನಲ್ಲಿ ನೆಲಸಲಿ, ಪಾತಿವ್ರತ್ಯಧರ್ಮ ಅನಂತವಾಗಿರಲಿ, ೫೦. ರಾಜರು ಧರ್ಮಿಷ್ಠರಾಗಲಿ, ಬ್ರಾಹ್ಮಣರು ಸುಖದಿಂದ ಇರಲಿ, ದಂಪತಿಗಳು ಪರಸ್ಪರ ಹೊಂದಿಕೊಂಡಿರಲಿ, ಪ್ರೀತಿಯಿಂದ ಸಮಸ್ತರೂ ಸುಖವಾಗಿರಲಿ. ೫೧. ಯಾವಾತನು ಶ್ರೀವೇದಮಾರ್ಗವನ್ನು ಪ್ರತಿಷ್ಠಾಪನೆ ಮಾಡಿದ ಆಚಾರ್ಯನೆಂದೂ, ವೈಷ್ಣವ ಧರ್ಮಮೂರ್ತಿ, ಉಭಯ ವೇದಾಂತ ಚಾರ್ಯ ಎಂದೂ ನಾನಾ ಬಗೆಯಾಗಿ ಕೀರ್ತಿಪಡೆದು ಇದ್ದಾನೋ - ೫೨. ಯಾವಾ ತನು ಶುಕಾಚಾರ್ಯರು, ವೇದವ್ಯಾಸರು, ವಾಲ್ಮೀಕಿಗಳು, ಪರಾಶರರು ಇತರಿಗೆ ಸಮನೆನಿಸಿ ಶ್ರೀಶನ ಪಾದಕಮಲಗಳಲ್ಲಿ ಭಕ್ತಿ ತತ್ತ್ವಜ್ಞಾನಗಳ ರಾಶಿಯೇ ಎಂದು ಖ್ಯಾತ ನಾಗಿದ್ದಾನೋ - ೫೩. ಇಂಥ ಮಹಿಮೆಯಿಂದ ಪ್ರಸಿದ್ಧನಾದ ಅಳಸಿಂಗ ರಾರ್ಯನ ಉದ್ದಾಮ ಕೃಪಾವೈಭವಕ್ಕೆ ನಾನು ಪಾತ್ರಳಾಗಿ ಆತನ ಮಹಿಮೆಯಿಂದ ಈ ಮಹಾ

---

೫. (ಖ) ಪಾದ.

ಧರ್ಮರಹಸ್ಯವನರಿತಿರ್ಪೆನೆಂಬೊಂದು
ಪೆರ್ಮೆಯೊಳುಸುರ್ದವಳಲ್ಲ
ಧರ್ಮದ ನೆನಹು ಮರೆಯದಂತೆ ಕೃತಿಯಾಗಿ
ನಿರ್ಮಿಸಿ ನೆಲೆಗೊಳಿಸಿದನು ೫೪

ಭಾವಿಸೆ ಬಿಜ್ಜೆಗಲಿತ ಪೆರ್ಮೆಯೆನಗಿಲ್ಲ
ದೇವತೆಗಳ ವರಮಿಲ್ಲ
ಆವುದನುಪದೇಶವಿತ್ತನಾರ್ಯನು ತನ
ಗಾ ವಿಧದೊಳು ಪೇಳಿದೆನು ೫೫

ಓಲೆವಿಡಿದು ನಾಮೋದಲೇಕಿದನೆಮ್ಮ
ಶೀಲವನೆಂದು ಕಳೆಯದೆ
ಬಾಲೆ ಬಣ್ಣಿಸಿ ಬಳಲಿದಳೆಂಬ ಮರುಕದಿಂ
ದಾಲಿಪುದಖಿಲ ಸತಿಯರು ೫೬

ಮಳೆಯಕ್ಕೆ ಕಾಲಕಾಲಕೆ ದೇವರೊಲವಿಂದ
ಬೆಳೆಗೈಗೆ ಪೆರ್ಚುಗೆಯಕ್ಕೆ
ಇಳೆಯೊಳು ಪತಿ ಪುತ್ರ ಪೌತ್ರ ಸಂಪದದೊಡ
ನೊಳುವೆಂಡಿರೊಪ್ಪದೊಳಿರ್ಕೆ ೫೭

ಕೃತಿಯನ್ನು ಹೇಳಿದ್ದೇನೆ. ೫೪. ಧರ್ಮರಹಸ್ಯವೆಲ್ಲ ನನಗೆ ತಿಳಿದಿದೆ ಎಂಬ ಹೆಮ್ಮೆಯಿಂದ ನಾನು ಇದನ್ನು ರಚಿಸಲಿಲ್ಲ. ಧರ್ಮದ ನೆನಪು ಮರೆಯದೆ ಇರಲಿ ಎಂದು ಈ ಕೃತಿರೂಪದಲ್ಲಿ ಹೇಳಿದ್ದೇನೆ. ೫೫. ವಿದ್ಯೆಯನ್ನು ಕಲಿತಿದ್ದೇನೆ ಎಂಬ ಹೆಮ್ಮೆ ನನಗಿಲ್ಲ. ನನಗೆ ಯಾವ ದೇವತೆಗಳ ವರವೂ ಇಲ್ಲ. ಆಚಾರ್ಯರು ನನಗೆ ಯಾವುದನ್ನು ಉಪದೇಶ ಮಾಡಿದರೋ ಅದನ್ನು ಅದೇ ರೀತಿಯಲ್ಲಿ ಹೇಳಿದ್ದೇನೆ. ೫೬. ಇದು ನಮ್ಮ ಶೀಲ, ಓಲೆಯ ಹಾಳೆಗಳನ್ನು ಹಿಡಿದು ಏಕೆ ಓದಬೇಕು - ಎಂದು ತಿರಸ್ಕರಿಸದೆ, ಹೆಣ್ಣುಮಗಳು ವರ್ಣಿಸಿ ಆಯಾಸಗೊಂಡಿದ್ದಾಳೆ ಎಂಬ ಕರುಣೆಯಿಂದ ಎಲ್ಲ ಸತಿಯರೂ ಇದನ್ನು ಕೇಳಬೇಕು. ೫೭. ದೇವರ ಕೃಪೆಯಿಂದ ಕಾಲಕಾಲಕ್ಕೆ ಮಳೆಯಾಗಲಿ, ಬೆಳೆ ಬೆಳೆಯಲಿ, ಅಭಿವೃದ್ಧಿಯಾಗಲಿ, ಲೋಕದಲ್ಲಿ ಗಂಡ, ಮಕ್ಕಳು, ಮೊಮ್ಮಕ್ಕಳು ಮೊದಲಾದ ಸಂಪತ್ತಿನಿಂದ ಸಾಧ್ವಿಯರು ಚೆನ್ನಾಗಿರಲಿ,

ಶ್ರೀರಂಗ ಪಟ್ಟಣದೊಳು ಸಿರಿ ನೆಲಸಿರ್ಕೆ
ಭೂರಿವೈಭವ ಪುದಿದಿರ್ಕೆ
ಶ್ರೀರಂಗಧಾಮನ ದಿವ್ಯಯಾತ್ರೋತ್ಸವ
ದಾರಾಧನೆ ಮಿಗಿಲಕ್ಕೆ ೫೮

ಕನ್ನಡನಾಡೊಳು ಕಲಿಯುಗ ಪುಗದಿರ್ಕೆ
ಕನ್ನಡಿಗರು ಘನರಕ್ಕೆ
ಉನ್ನತಿವಡೆಗೆಯವರ ದೇಗುಲಗಳು
ಸನ್ನುತಿವಡೆಗೆ ಸತ್ರಗಳು ೫೯

ಈ ವಸುಧೆಯ ಧರ್ಮದೊಳು ಪಾಲಿಸುಗೆ ಚಿಕ
ದೇವರಾಜೇಂದ್ರಚಂದ್ರಮನು
ದೇವಗೋವಿಪ್ರಸಂತತಿ ಸಂತಸದೊಳಿರ್ಕೆ
ಗೋವಿಂದಗಾನಂದಮಕ್ಕೆ ೬೦

ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಮ್ಮನುಸುರ್ದ ಕಬ್ಬದೊಳು
'ಮನ್ನಣೆ'ವಡೆದೊಪ್ಪಿತೊಂಬತ್ತನೆಯ ಸಂಧಿ
ಸನ್ನುತ ಗುಣಸಂಬಂಧಿ ೬೧

ಹದಿಬದೆ ಧರ್ಮಂ
ಸಂಪೂರ್ಣಂ

೫೮. ಶ್ರೀರಂಗಪಟ್ಟಣದಲ್ಲಿ ಲಕ್ಷ್ಮಿ ನೆಲಸಿರಲಿ, ಅಖಂಡ ವೈಭವ ತುಂಬಿರಲಿ, ಶ್ರೀರಂಗ ದಿವ್ಯಯಾತ್ರೋತ್ಸವದ ಆರಾಧನೆ ಬೆಳೆಯಲಿ. ೫೯. ಕನ್ನಡನಾಡಿನಲ್ಲಿ ಕಲಿಯುಗ ಪ್ರವೇಶಿಸದೆ ಇರಲಿ, ಕನ್ನಡಿಗರೆಲ್ಲ ದೊಡ್ಡವರಾಗಲಿ, ಅಗ್ರಹಾರಗಳೂ ದೇವಾಲಯಗಳೂ ಉನ್ನತವಾಗಲಿ, ಸತ್ರಗಳು ಪ್ರಸಿದ್ಧವಾಗಲಿ, ೬೦. ಚಿಕ್ಕದೇವರಾಜೇಂದ್ರ ಚಂದ್ರನು ಈ ಲೋಕವನ್ನು ಧರ್ಮದಿಂದ ಪಾಲಿಸಲಿ. ದೇವತೆಗಳು, ಗೋವುಗಳು, ಬ್ರಾಹ್ಮಣಸಮೂಹ ಸಂತೋಷದಿಂದಿರಲಿ. ಗೋವಿಂದನಿಗೆ ಆನಂದವುಂಟಾಗಲಿ. ೬೧. ಚೆನ್ನಿಗ ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮ ರಚಿಸಿದ ಕಾವ್ಯದಲ್ಲಿ ಗುಣಯುಕ್ತವಾದ ಉನ್ನತವಾಗಿ ಗೌರವ ಪಡೆದ ಒಂಬತ್ತನೆಯ ಸಂಧಿ ಸಮಾಪ್ತವಾಯಿತು.

ಹದಿಬದೆಯ ಧರ್ಮ
ಮುಗಿಯಿತು

---

೫. (ಖ) ಉನ್ನತಿ.

# ೧. ಪೂರ್ವಕಥೆ

**ಸಂಧಿ ೨ : ಪದ್ಯ ೪೬**

ಅತ್ರಿಮುನಿ ಸಪ್ತರ್ಷಿಗಳಲ್ಲಿ ಒಬ್ಬರು. ಅವರ ಪತ್ನಿ ಅನಸೂಯ. ಆಕೆ ಪತಿವ್ರತಾಶಿರೋಮಣಿ. ಪಾತಿವ್ರತ್ಯದ ಶಕ್ತಿಯನ್ನು ವಿವರಿಸುವಾಗ ಅನಸೂಯೆಯ ಶಕ್ತಿ ಬಗ್ಗೆ ಒಂದು ಕಥೆ ಇದೆ.

ಅನಸೂಯೆಯ ಪಾತಿವ್ರತ್ಯದ ಕೀರ್ತಿ ಮೂರುಲೋಕವನ್ನು ಮುಟ್ಟಿತ್ತು. ಅವಳ ಈ ಶಕ್ತಿಯಿಂದ ದೇವೇಂದ್ರ ಹೆದರಿ ತ್ರಿಮೂರ್ತಿಗಳಲ್ಲಿ ಮೊರೆಯಿಟ್ಟನು. ತ್ರಿಮೂರ್ತಿಗಳು (ಬ್ರಹ್ಮ, ವಿಷ್ಣು, ರುದ್ರ) ಭಿಕ್ಷುಕರ ವೇಷದಿಂದ, ಅತ್ರಿಋಷಿಗಳು ಮನೆಯಲ್ಲಿಲ್ಲದಾಗ ಭಿಕ್ಷೆ ಬೇಡಲು ಅವರ ಮನೆಗೆ ಬಂದರು. ಆಕೆ ಅವರನ್ನು ಭೋಜನಕ್ಕೆ ಆಹ್ವಾನಿಸಿದಳು. ಋಷಿಗಳು ಬರುವುದನ್ನೂ ಕಾಯಲಾರದೆ ತ್ರಿಮೂರ್ತಿಗಳು ಊಟಕ್ಕೆ ಅವಸರ ಪಡಿಸಿದರು. ಆಕೆ ಆಗಬಹುದು ಎಂದು ಒಪ್ಪಿಕೊಂಡಳು. ಆದರೆ ಅತಿಥಿಗಳು ಅನಸೂಯೆ ವಿವಸ್ತ್ರಳಾಗಿ ತಮಗೆ ಬಡಿಸಬೇಕೆಂದೂ ಹಾಗಾದರೆ ಮಾತ್ರ ತಾವು ಭಿಕ್ಷವನ್ನು ಸ್ವೀಕರಿಸುವೆವೆಂದೂ ನಿಯಮ ಹಾಕಿದರು. 'ಅತಿಥಿಗಳನ್ನು ಶಿಶುಗಳೆಂ'ದು ಭಾವಿಸಬೇಕೆಂಬ ಪದ್ಧತಿಯಂತೆ ಅವರನ್ನೆಲ್ಲ ಶಿಶುಗಳೆಂದು ಭಾವಿಸಿ ಪತಿಯ ಪಾದ ತೊಳೆದ ನೀರನ್ನು ಅವರ ಮೇಲೆ ಪ್ರೋಕ್ಷಿಸಿದಳು. ಅವರು ಕೂಸುಗಳಾದರು. ಅನಸೂಯೆ ಆ ಮಕ್ಕಳನ್ನು ಸತ್ಕರಿಸಿದಳು. ಅಷ್ಟರಲ್ಲಿ ಅತ್ರಿಋಷಿಗಳು ಪರ್ಣಶಾಲೆಗೆ ಬಂದು, ಮಕ್ಕಳಾಗಿರುವ ತ್ರಿಮೂರ್ತಿಗಳನ್ನು ಸಂದರ್ಶಿಸಿ ಆ ಮಕ್ಕಳಿಗೆ ನಮಸ್ಕರಿಸಿದರು. ತ್ರಿಮೂರ್ತಿಗಳು ತಮ್ಮ ದಿವ್ಯಸ್ವರೂಪವನ್ನು ತೋರಿಸಿ ಅನಸೂಯ ದೇವಿಯ ಪಾತಿವ್ರತ್ಯ ಮಹಿಮೆಯನ್ನು ಕೊಂಡಾಡಿ ದಂಪತಿಗಳನ್ನು ಅನುಗ್ರಹಿಸಿದರು. ಆ ಮೂವರೂ ಮುಂದೆ ತಮ್ಮ ತಮ್ಮ ಅಂಶಗಳಿಂದ ಚಂದ್ರ, ದತ್ತಾತ್ರೇಯ ಮತ್ತು ದೂರ್ವಾಸ ಮಕ್ಕಳಾಗಿ ಆಕೆಯ ಹೊಟ್ಟೆಯಲ್ಲಿ ಜನಿಸಿದರು.

**ಸಂಧಿ ೨ : ಪದ್ಯ ೭ ; ಸಂಧಿ ೩ : ಪದ್ಯ ೪೭**

ರಾಮಾಯಣದಲ್ಲಿ ಬರುವ ಸೀತಾದೇವಿ ಅನುಭವಿಸಿದ ಕಷ್ಟವನ್ನೂ, ಆಕೆ ತನ್ನ ಪಾತಿವ್ರತ್ಯವನ್ನು ಸಿದ್ಧಪಡಿಸಿ ತೋರಿಸಲು ಅಗ್ನಿಪ್ರವೇಶ ಮಾಡಿ ನಿಷ್ಕಳಂಕಳಾಗಿ ಹೊರ ಬಂದುದನ್ನೂ, ಅವಳ ಪಾತಿವ್ರತ್ಯದ ಮಹಿಮೆಯಿಂದ ಅಗ್ನಿಯೂ ಶೀತಲವಾಯಿತು, ಎಂಬುದನ್ನು ಇಲ್ಲಿ ಹೇಳಿದೆ.

**ಸಂಧಿ ೨ : ಪದ್ಯ ೪೮**

ತಾರಕಾಸುರನಿಗೆ ಮೂರುಜನ ಮಕ್ಕಳು. ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ

ಎಂಬುದು ಅವರ ಹೆಸರುಗಳು. ಅವರು ಚಿನ್ನ, ಬೆಳ್ಳಿ, ಕಬ್ಬಿಣದ ಲೋಹಗಳಿಂದ ಮೂರು ಪಟ್ಟಣಗಳನ್ನು ಕಟ್ಟಿದರು. ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಲೋಕದಲ್ಲಿ ಅಜೇಯರಾಗಿ ಮೆರೆದರು. ಅವರು ಕಟ್ಟಿದ್ದ ಮೂರು ಪಟ್ಟಣಗಳು ಸಂಚಾರಿ ಪಟ್ಟಣಗಳು. ಅವು ಸ್ವರ್ಗ, ಅಂತರಿಕ್ಷ, ಭೂಮಿಗಳಲ್ಲಿ ಸಂಚರಿಸುತ್ತಲೇ ಇರುತ್ತವೆ. ಹಾಗೆ ಸಂಚರಿಸುವಾಗ ಮೂರೂ ಒಮ್ಮೆ ಒಟ್ಟಿಗೆ ಸೇರುತ್ತವೆ. ಹೀಗೆ ಸೇರುವುದು, ಬಹು ಅಪೂರ್ವ. ಸೇರಿದಾಗ ಮಾತ್ರ ಅವಕ್ಕೆ ನಾಶ ಸಂಭವಿಸಬಹುದು. ಈ ಅಸುರರ ಕಾಟ ಹೆಚ್ಚಾದಾಗ ಪರಮೇಶ್ವರ ತ್ರಿಪುರವನ್ನು ನಾಶಮಾಡಲು ನಿಶ್ಚಯಿಸಿದ. ಆದರೆ ಅವನು ಯುದ್ಧಮಾಡುವಾಗಲೆಲ್ಲ ಶಿವಭಕ್ತೆಯರಾದ, ಪತಿವ್ರತೆಯರಾದ ರಾಕ್ಷಸಸ್ತ್ರೀಯರು ತ್ರಿಪುರವನ್ನು ರಕ್ಷಿಸಲು ಮುಂದೆ ಬರುತ್ತಿದ್ದರು. ಅವರ ಪಾತಿವ್ರತ್ಯ ಮಹಿಮೆಯ ಮುಂದೆ ಮಹೇಶ್ವರನ ಶಕ್ತಿ ಕುಂದುತ್ತಿತ್ತು. ಹೀಗೆ ಬಹುವರ್ಷಕಾಲ ತ್ರಿಪುರವನ್ನು ರಾಕ್ಷಸಸ್ತ್ರೀಯರು ರಕ್ಷಿಸಿದರು ಎಂಬುದು ಶೈವಪುರಾಣದಲ್ಲಿನ ಒಂದು ಸಂದರ್ಭ.

**ಸಂಧಿ ೨ : ಪದ್ಯ ೪೯-೫೦**

ಮಿಥಿಲೆ ಜನಕಮಹಾರಾಜನ ರಾಜಧಾನಿ. ಅದು ಧರ್ಮದ ನೆಲೆ. ಅಲ್ಲಿರುವವರಲ್ಲಿ ಧರ್ಮದ ನಿಜವನ್ನು ಬಲ್ಲವರು. ಅಲ್ಲೊಬ್ಬ ಧರ್ಮವ್ಯಾಧ. ಅವನ ವೃತ್ತಿ ಮಾಂಸ ವ್ಯಾಪಾರ. ಪತಿವ್ರತೆಯೊಬ್ಬಳು ತನ್ನ ಮನೆಗೆ ಬಂದ ಮುನಿಮುಖ್ಯನನ್ನು ಧರ್ಮದ ತಿಳಿವಿಗಾಗಿ ಧರ್ಮವ್ಯಾಧನಲ್ಲಿಗೆ ಕಳಿಸುತ್ತಾಳೆ. ಇವನು ಬಂದುದನ್ನು ನೋಡಿ ಆ ಧರ್ಮವ್ಯಾಧ 'ನಿನ್ನನ್ನು ಆ ಪತಿವ್ರತಾಶಿರೋಮಣಿ ಕಳಿಸಿದಳೆ ?' ಎಂದು ಕೇಳಿ ಅವನನ್ನು ಮನೆಗೆ ಆಹ್ವಾನಿಸಿ ಆ ಋಷಿಪುಂಗವನಿಗೆ ಧರ್ಮಸೂಕ್ಷ್ಮವನ್ನು ಬೋಧಿಸುತ್ತಾನೆ.

**ಸಂಧಿ ೫ : ಪದ್ಯ ೪೬**

ಇಲ್ಲಿ ನಳದಮಯಂತಿಯರ ಕಥೆಯನ್ನು ದೃಷ್ಟಾಂತವಾಗಿ ಕೊಟ್ಟಿದೆ. ಎಷ್ಟೇ ಕಷ್ಟಬಂದರೂ ದಮಯಂತಿ ಗಂಡನನ್ನು ಬಿಡಲಿಲ್ಲ. ತಿರಸ್ಕರಿಸಲಿಲ್ಲ. ಪತಿಯ ಮೇಲಿನ ಪ್ರೀತಿ ಗಾಢವಾಗಿ ಅವನನ್ನು ಪುನಃ ಪಡೆಯುವ ಅವಳ ಪಾತಿವ್ರತ್ಯದ ಶಕ್ತಿ ಎಷ್ಟು ಬಲವಾದದ್ದು ಎಂಬುದೇ ಉದಾಹರಣೆ.

**ಸಂಧಿ ೩ : ಪದ್ಯ ೪೯**

ವಸಿಷ್ಠ-ಅರುಂಧತಿ, ಅತ್ರಿ-ಅನಸೂಯ, ಅಗಸ್ತ್ಯ-ಲೋಪಾಮುದ್ರೆ ಇವರ ದಾಂಪತ್ಯ ಆದರ್ಶವಾದದ್ದು. ಪತ್ನಿಯರು ತಮ್ಮ ಗಂಡಂದಿರ ಬಗ್ಗೆ ನಡೆದುಕೊಂಡ ರೀತಿ ಸುಖದಾಂಪತ್ಯಕ್ಕೆ ಪಾತಿವ್ರತ್ಯ ಮಹಿಮೆಗೆ ಮಾರ್ಗದರ್ಶಕವಾದದ್ದು, ಲೋಪಾಮುದ್ರೆಯೆಂಬ ರಾಜಕುಮಾರಿ ಋಷಿಗಳ ಕೈಹಿಡಿದ ಮೇಲೆ ಋಷಿಜೀವನವನ್ನು ಸಂತೋಷದಿಂದ ಕೈಕೊಂಡಳು.

**ಸಂಧಿ ೫ : ಪದ್ಯ ೫**

ಹಿಮವಂತನ ಮಗಳು ಪಾರ್ವತಿ, ಭೃಗುವಿನ ಮಗಳು ಲಕ್ಷ್ಮಿ, ಜನಕನ ಮಗಳು ಸೀತೆ. ಈ ಹೆಣ್ಣುಮಕ್ಕಳಿಂದ ಹಿಮವಂತನೇ ಮೊದಲಾದವರು ಕೀರ್ತಿವಂತರಾದರು.

**ಯೋಗದಶಾ : ಸಂಧಿ ೭ : ಪದ್ಯ ೪೨**

ಆತ್ಮದ ಉನ್ನತಿಗಾಗಿ ಋಷಿಗಳು ತೋರಿಸಿರುವ ಶಮದಮಾದಿ ಪ್ರಾಯೋಗಿಕ ಪ್ರಯತ್ನಗಳೇ ಯೋಗಗಳು, ಯೋಗಾಭ್ಯಾಸದ ಸ್ಥಿತಿಗೆ ಅಥವಾ ಅವಸ್ಥೆಗೆ 'ಯೋಗದಶಾ' ಎಂದು ಹೆಸರು.

**ಕರ್ಮಯೋಗಿ : ಸಂಧಿ ೯ : ಪದ್ಯ ೧**

ಯೋಗಗಳಲ್ಲಿ ಸಾಮಾನ್ಯವಾಗಿ ಜ್ಞಾನಯೋಗ, ಕರ್ಮಯೋಗ ಮತ್ತು ಭಕ್ತಿ ಯೋಗ ಎಂದು ಮೂರು ವಿಧಗಳುಂಟು. ಇವುಗಳಲ್ಲಿ ಕರ್ಮಯೋಗಕ್ಕೆ ಹೆಚ್ಚು ಪ್ರಾಶಸ್ತ್ಯ. ಮನುಷ್ಯ ಕರ್ಮಮಾಡದೆ ಮೋಕ್ಷವನ್ನು ಪಡೆಯಲಾರನು. ಅವನು ಮನುಷ್ಯನಾಗಿ ಹುಟ್ಟುವುದು ಕರ್ಮವನ್ನು ಆಚರಿಸಲಿಕ್ಕೆ, ಬದುಕಿಗೆ, ಮುಕ್ತಿಗೆ ಎರಡಕ್ಕೂ ಕರ್ಮ ಅನಿವಾರ್ಯ. ಈ ಕರ್ಮವನ್ನು ಆಚರಿಸುವಾಗ ನಿಷ್ಕಾಮದಿಂದ ಆಚರಿಸಬೇಕು. ಹಾಗೆ ಆಚರಿಸುವ ನಿಷ್ಕಾಮಕರ್ಮಕ್ಕೆ 'ಕರ್ಮಯೋಗ' ಎಂದು ಹೆಸರು.

**ರಹಸ್ಯತ್ರಯ : ಸಂಧಿ ೯ : ಪದ್ಯ ೪೬**

ಪ್ರಕೃತಿ, ಆತ್ಮ ಪರಮಾತ್ಮ ಇವೇ ರಹಸ್ಯತ್ರಯಗಳು. ಪ್ರಕೃತಿ ಐದು ಅಂಶಗಳಿಂದ ಕೂಡಿದೆ. ಪೃಥ್ವಿ, ಅಪ್ಪು (ನೀರು), ತೇಜಸ್ಸು (ಅಗ್ನಿ), ವಾಯು (ಗಾಳಿ), ಆಕಾಶ. ಇವಕ್ಕೆ ಪಂಚಭೂತಗಳೆಂದೂ ಹೆಸರು. ಆತ್ಮ: ಜೀವಕ್ಕೆ ಆತ್ಮ ಎಂದು ಹೆಸರು. ಪರಮಾತ್ಮ: ದೇವರು, ಸೃಷ್ಟಿಗೊಡೆಯ.

**ಪಂಚ ಸಂಸ್ಕಾರಗಳು ಸಂಧಿ ೯ : ಪದ್ಯ ೪೭**

ತಪ, ಪುಂಡ್ರ, ನಾಮ, ಮಂತ್ರ, ಯಾಗ. ಇಲ್ಲಿ ಶ್ರೀವೈಷ್ಣವ ಸಂಪ್ರದಾಯದ ಸಂಸ್ಕಾರಗಳನ್ನು ಹೇಳಿದೆ.

**ಅರ್ಥಪಂಚಕ : ಸಂಧಿ ೯ : ಪದ್ಯ ೪೭**

ಮೋಕ್ಷ ಸಾಧಕರಾದ ಐದು ಉಪಾಯಗಳಿಗೆ ಅರ್ಥಪಂಚಕಗಳೆಂದು ಹೆಸರು. ಈ ಸಾಧನೆಗಳು ಸಾಮಾನ್ಯವಾಗಿ ಶ್ರೀವೈಷ್ಣವಮತಾನುಸಾರವಾಗಿ ಅವರಲ್ಲಿ ರೂಢಿ ಯಲ್ಲಿದೆ. ಈ ಐದು ಸಾಧನೆಗಳೆಂದರೆ ಸ್ವಸ್ವರೂಪ. ಪರಸ್ವರೂಪ, ಪುರುಷಾರ್ಥ ಸ್ವರೂಪ, ಉಪಾಯಸ್ವರೂಪ ಮತ್ತು ವಿರೋಧಿಸ್ವರೂಪ.

**ಸ್ವಸ್ವರೂಪ :** ಎಂದರೆ ಅಸಂಖ್ಯಾತ ಜೀವಿಗಳು ತಮ್ಮ ಆತ್ಮಸ್ವರೂಪವನ್ನು ಕಂಡುಕೊಂಡು ಉದ್ಧಾರವಾಗುವುದು ಎಂದರೆ ಪುನರ್ಜನ್ಮವಿಲ್ಲದೆ ನಾರಾಯಣನ ಸಾಮೀಪ್ಯ ಸುಖವನ್ನು ಪಡೆಯುವುದು. ಜೀವಿಗಳಲ್ಲಿ ಬದ್ಧ, ಕೇವಲ, ಮುಮುಕ್ಷು, ಮುಕ್ತ, ನಿತ್ಯ ಎಂಬ ಐದು ಅವಸ್ಥೆಗಳುಂಟು. ಕೊನೆಯ ಹಂತದ ಜೀವಿಯೂ ಈ ಮೂಲಕ ಪರಮಾತ್ಮನ ಸಾಮೀಪ್ಯಸುಖವನ್ನು ಪಡೆಯಬಹುದು.

**ಪರಸ್ವರೂಪ :** ಭಗವಂತನ ರೂಪು, ಮಹಿಮೆ, ಶಕ್ತಿ ಮೊದಲಾದ ಆತನ ಅಖಂಡಜ್ಞಾನವನ್ನು ವಿಚಾರದಿಂದ ತಿಳಿಯುವುದು.

**ಪುರುಷಾರ್ಥಸ್ವರೂಪ :** ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ವಿವರಗಳನ್ನು ತಿಳಿದು ಜೀವಿ ತನ್ನ ಧ್ಯೇಯವನ್ನು ಅರಿತುಕೊಳ್ಳುವುದು.

**ಉಪಾಯಸ್ವರೂಪ :** ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿ ಕೊಡಬಲ್ಲ ಸಾಧನಗಳು. ಇವು ಐದು ವಿಧಾನ. ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ಇವು ಪ್ರಸಿದ್ಧವಾಗಿರುವ ಯೋಗಗಳೇ. ಇವುಗಳ ಜೊತೆಗೆ ಪ್ರಪತ್ತಿಯೋಗ ಎಂಬುದು 'ಪರಮಾತ್ಮನಲ್ಲಿ' 'ಅನ್ಯಥಾ ಶರಣಂ ನಾಸ್ತಿ' ಎಂಬಂತೆ ಆತನಲ್ಲಿ ಪೂರ್ಣವಾಗಿ ಆತ್ಮಾರ್ಪಣೆ ಮಾಡಿಕೊಳ್ಳುವುದು. **ಗುರುಆಚಾರ್ಯಭಿಮಾನ :** ಜೀವಿಯ ಏಳ್ಗೆಗಾಗಿ ಸಾಧನೆ ಮಾಡುವುದು. ಅಂಥಲ್ಲಿ ಜೀವಿ ಆಚಾರ್ಯನನ್ನು ಪೂರ್ಣವಾಗಿ ನಂಬುವುದು ಮತ್ತು ಅವಲಂಬಿಸಿ ಅಭಿಮಾನ ತಳೆಯುವುದು.

**ವಿರೋಧಿಸ್ವರೂಪ :** ಪುರುಷಾರ್ಥಸಾಧನೆಗೆ ಅಡ್ಡಬರುವ ಐದು ತೊಂದರೆಗಳು : ೧. ಭ್ರಾಂತಿ ೨. ಮೋಹ ೩. ಅಪನಂಬಿಕೆ ೪. ಭಗವಂತನ ವಿಚಾರದಲ್ಲಿ ಅಪಚಾರ ೫. ಭಗವಂತನ ಮತ್ತು ಭಾಗವತರ ವಿಚಾರದಲ್ಲಿ ವಿರೋಧಿತ್ವ. ಈ ಎಡರುಗಳನ್ನು ಗೆಲ್ಲುವುದು ಒಂದು ಸಾಧನೆ.

**ಪಾಂಚಕಾಲಿಕ ಧರ್ಮ : ಸಂಧಿ ೯ : ಪದ್ಯ ೪೭**

ವಿಷ್ಣುಸೇವೆಯ ಐದು ಪ್ರಕಾರಗಳು. **೧. ಅಭಿಗಮನ** : ನಾರಾಯಣ ಸ್ಮರಣೆ **೨. ಉಪಾದಾನ** : ಪೂಜೆಗೆ ಪತ್ರೆ ಪುಷ್ಪಾದಿ ಪೂಜಾದ್ರವ್ಯಗಳ ಸಂಗ್ರಹ **೩. ಇಜ್ಯಾ** : ಭಕ್ತಿಯಿಂದ ಲೋಕೇಶ್ವರನ ಪೂಜೆ. **೪. ಸ್ವಾಧ್ಯಾಯ** : ಧರ್ಮಗ್ರಂಥಗಳ ಪಠನ ಮತ್ತು ಮನನ. **೫. ಯೋಗ** : ದೇವರಲ್ಲಿ ಮನಸ್ಸನ್ನು ಲೀನಗೊಳಿಸುವುದು ; ಧ್ಯಾನ.



# ೨. ಶಬ್ದಕೋಶ

## ಅ

| | | |
|---|---|---|
| ಅಕಲುಷೆ | ೧-೧೪ | ಮಲಿನತೆಯಿಲ್ಲದವಳು |
| ಅಗರ | ೯-೫೯ | ಸಂ. ಅಗ್ರಹಾರ |
| ಅಗ್ರ | ೨-೩೩ | ಮೊದಲು, ತುದಿ,ಶ್ರೇಷ್ಠ |
| ಅಡಕ | ೪-೬,೪೨ | ವಿಧೇಯತೆ, ಹತೋಟಿ, ವಶ |
| ಅಸಡು | ೯-೩೦ | ಒದಗು, ಸಂಭವಿಸು |
| ಅಡಿ | ೩-೧೫, ೪-೩೯ | ಪಾದ, ಕಾಲು |
| ಅಣ್ಪು | ೭-೯ | ಲೇಪನ, ಬಳಿಯುವುದು |
| ಅತಿಥಿ | ೮-೩೨ | ಕರಸಿಕೊಂಡು ಮನೆಗೆ ಬಂದವನು |
| ಅಧವ | ೮-೩೨ | ದೀನ, ಪೋಷಕರಿಲ್ಲದವ |
| ಅನು | ೪-೩೭ | ಹದ, ಔಚಿತ್ಯ |
| ಅನುನಯ | ೬-೪೦ | ಸ್ನೇಹ |
| ಅನುಪಮ | ೩-೧ | ಹೋಲಿಕೆಯಿಲ್ಲದ |
| ಅನುರಾಗ | ೭-೪೨ | ಭಕ್ತಿ, ಪ್ರೀತಿ |
| ಅನುವದಿಸು | ೫-೩ | ತಿಳಿಸು, ಹೇಳು |
| ಅನುವೃತ್ತಿ | ೪-೩ | ಅನುಸರಣೆ |
| ಅಪಾಂಸುಲೆ | ೨-೨೦ | ಪರಿಶುದ್ಧಳು, ಪತಿವ್ರತೆ |
| ಅಬಲೆ | ೪-೪೭ | ಬಲವಿಲ್ಲದವಳು, ಹೆಂಗುಸು |
| ಅಮರ್ದು | ೫-೧ | ಅಮೃತ |
| ಅರಿದು | ೨-೨೬ | ಕಷ್ಟ, ಅಸಾಧ್ಯ |
| ಅಲುಗು | ೭-೧೯ | ಅಲುಗಿಸು, ಕದಲಿಸು |
| ಅಲೆಗೆಯ್ | ೫-೩೭ | ಹಿಂಸೆಮಾಡು |
| ಅವಮತಿ | ೪-೧೦ | ಅವಮಾನ |
| ಅಷ್ಟೈಶ್ವರ್ಯ | ೧-೧೫ | ಎಂಟು ಐಶ್ವರ್ಯಗಳು : ರಾಜ್ಯ. ಭಂಡಾರ ಸೈನ್ಯ, ಆನೆ, ಕುದುರೆ, ಛತ್ರಿ, ಚಾಮರ, ಪಲ್ಲಕ್ಕಿ |
| ಅಳ್ದು | ೭-೩೦ | ಮುಳುಗಿ |
| ಅಳಲು | ೫-೩೩, ೭-೨೬ | ಸಂಕಟ, ದುಃಖ |
| ಅಳವು | ೭-೨೮ | ಬಲ, ಶಕ್ತಿ |
| ಅಳವಡು | ೮-೩ | ಹೊಂದು |
| ಅಳ್ಕರು | ೨-೩೭ | ಮಮತೆ |

| | | |
|---|---|---|
| ಅಳಿ | ೭-೨೩ | ನಾಶವಾಗು |
| ಅಳುಕು | ೫-೪೦ | ಹೆದರಿಕೆ, ದಿಗಿಲು |
| ಅಂಕೆ | ೬-೧೮ | ಹಿಡಿತ, ಸ್ವಾಧೀನ |
| ಅಂಗವಿಸು | ೧-೨೬ | ಹೊಂದಿಸು |
| ಅಂಗಹಾರ | ೬-೨೨ | ಅಂಗವಿಕ್ಷೇಪ |
| ಅಂಗ | ೮-೨೨ | ಒಡಲು, ದೇಹ |
| ಅಂಡಲೆ | ೪-೫, ೮-೪೭ | ಪೀಡೆ, ತೊಂದರೆ |
| ಅಂದ | ೨-೪೧, ೩-೧೪ | ರೀತಿ, ಬಗೆ |
| ಅಂಬುಜ | ೩-೪ | ತಾವರೆ |

## ಆ

| | | |
|---|---|---|
| ಆಣತಿ | ೧-೩೭, ೩೦೫ | ಅಪ್ಪಣೆ |
| ಆಣ್ಮ | ೧೦೧೬, ೫-೩೨ | ಒಡೆಯ, ಸ್ವಾಮಿ |
| ಆತ್ಮ | ೪-೩ | ತನ್ನ |
| ಆನ್ | ೧-೪೪ | ತಾಳು, ಧರಿಸು |
| ಆಪು | ೪-೩೬ | ಆರ್ಪು, ಸಾಮರ್ಥ್ಯ |
| ಆರಭಟೆ | ೩-೨೫ | ಅಬ್ಬರ |
| ಆಯ | ೩-೨೬, ೬-೪೨ | ವರಮಾನ, ಹುಟ್ಟುವಳಿ |
| ಆರ್ | ೩-೨೫ | ಕೂಗು, ಗರ್ಜಿಸು, ಶಕ್ತನಾಗು |
| ಆರಯ್ | ೨-೨೯, ೩-೩೬ | ಯೋಚಿಸು, ವಿಚಾರಮಾಡು |
| ಆರೋಗಣೆ | ೮-೧೪ | ಊಟ |
| ಆಲಿ | ೭-೪೪ | ಕಣ್ಣುಗುಡ್ಡೆ |
| ಆಸುರ | ೩-೨೧ | ಜುಗುಪ್ಸೆ |

## ಇ

| | | |
|---|---|---|
| ಇಂಗದಿರ | ೨-೨ | ಚಂದ್ರ |
| ಇಂಗಿತ | ೫-೩೮, ೬-೨೨ | ಆಶಯ, ಅಭಿಪ್ರಾಯ, ಮನೋಭಾವ |
| ಇಂಗೋಲ | ೨-೨ | ಕಬ್ಬನ್ನು ಬಿಲ್ಲಾಗಿ ಉಳ್ಳವ, ಮನ್ಮಥ |
| ಇಂದೀವರ | ೪-೨ | ಕನ್ನೈದಿಲೆ |
| ಇಂದು | ೪-೨ | ಚಂದ್ರ |
| ಇನಿಯ | ೩-೩೮, ೪-೨೨ | ಪ್ರಿಯ |
| ಇಂಪುಗೊಳ್ | ೭-೫ | ತಾಳ್ಮೆಹೊಂದು, ಸುಖಪಡು |
| ಇಂಬು | ೨-೧೬ | ಅವಕಾಶ, ಎಡೆ |
| ಇರವು | ೨-೪೩ | ಸ್ಥಿತಿ |

| | | |
|---|---|---|
| ಇರುಳು | ೮-೫೦ | ಕತ್ತಲೆ |
| ಇಹ | ೫-೪೮ | ಈ ಲೋಕ, ಐಹಿಕ |

## ಈ

| | | |
|---|---|---|
| ಈಡು | ೯-೭ | ಪಾತ್ರ, ಸಮ |
| ಈಡಾಡು | ೭-೨೫ | ಎಸೆ, ಬೀಸಾಡು |

## ಉ

| | | |
|---|---|---|
| ಉಗ್ರ | ೨-೨೮, ೭-೨೨<br>೯-೪೪ | ಕ್ರೂರ, ಕಠಿಣವಾದ |
| ಉಗು | ೭-೪೫ | ಸುರಿ, ಸ್ರವಿಸು |
| ಉಜ್ಜುಗ | ೩-೩೯, ೮-೩೬ | ಉದ್ಯೋಗ, ಕೆಲಸ |
| ಉಡಿ | ೨-೮ | ಒಡೆ, ಮುರಿ |
| ಉಡುಗು | ೨-೮ | ಕುಗ್ಗು, ಕಡಮೆಯಾಗು |
| ಉದ್ದಂಡ | ೪-೪೧ | ಹೆಚ್ಚಿಕೊಂಡಿರುವ, ಗರ್ವಿಷ್ಠ |
| ಉನ್ನತಿ | ೫-೨೫ | ದೊಡ್ಡಸ್ತಿಕೆ, ಘನತೆ |
| ಉಪಕರಣ | ೮-೨೯ | ಸಾಮಾನು, ಸಲಕರಣೆ |
| ಉಪಸ್ಕರ | ೮-೨೬ | ಪದಾರ್ಥ |
| ಉರವಣಿಸು | ೭-೨೦ | ದುಡುಕು |
| ಉರು | ೨-೩೨, ೮-೩೭ | ಹೆಚ್ಚು |
| ಉಲಿ | ೭-೨೨ | ಶಬ್ದಮಾಡು, ಧ್ವನಿಮಾಡು |

## ಊ

| | | |
|---|---|---|
| ಊಡು | ೬-೨೫ | ತಿನ್ನಿಸು, ಊಟಮಾಡಿಸು |
| ಊಣೆಯ | ೪-೪೨ | ಕುಂದು, ಲೋಪ |
| ಊಳಿಗ | ೧-೪೫, ೫-೫೩ | ಸೇವೆ, ಪರಿಚರ್ಯೆ |

## ಎ

| | | |
|---|---|---|
| ಎಡೆ | ೨-೧೪, ೪-೩೭,<br>೭-೪೭ | ಸ್ಥಳ, ಅವಕಾಶ |
| ಎಣಿಸು | ೩-೪೨, ೭-೩೧ | ಯೋಚಿಸು, ಹಂಬಲಿಸು |
| ಎಣೆ | ೨-೨೬, ೩-೪೬ | ಸಮ, ಸರಿ |
| ಎರಕ | ೧-೨೮, ೬-೪೧<br>೭-೩೧ | ಅಂತಃಕರಣ, ಪ್ರೇಮ |

| | | |
|---|---|---|
| ಎರಗು | ೨-೧, ೬-೨೨ | ನಮಸ್ಕರಿಸು, ಬಾಗು |
| ಎರವು | ೬-೫೦, ೭-೪೮ | ದೂರ, ಅಂತರ, ಭೇದ |
| ಎರೆಯ | ೭-೪೭ | ಪ್ರಭು, ಸ್ವಾಮಿ |
| ಎರೆ | ೪-೧೯ | ಸುರಿ, ಹನಿಸು, ಯಾಚಿಸು |
| ಎಲರ್ | ೨-೭, ೭-೩೩ | ಗಾಳಿ |
| ಎಸಕ | ೨-೮, ೪-೨೬ | ಕೆಲಸ, ಸಾಮರ್ಥ್ಯ |
| | ೬-೨೪, ೭-೫ | |
| ಎಸಗು | ೨-೩೫, ೩-೧೬ | ಮಾಡು |
| | ೪-೩, ೭-೧೧ | |
| ಎಸೆ | ೧-೧೦, ೨-೩೦ | ಹೊಳೆ, ಪ್ರಕಾಶಿಸು |
| | ೩-೪೬ | |
| ಎಳಮೆ | ೪-೪೭ | ಚಿಕ್ಕತನ, ಬಾಲ್ಯ |
| ಎಳಸು | ೧-೨೧, ೫-೧೯ | ಬಯಸು, ಆಶಿಸು |

## ಏ

| | | |
|---|---|---|
| ಏಳಿಸು | ೨-೭ | ತಿರಸ್ಕರಿಸು |
| ಏಳ್ಗೆ | ೧-೨೧, ೫-೮ | ಹೆಚ್ಚಳ, ಅಭಿವೃದ್ಧಿ |

## ಐ

| | | |
|---|---|---|
| ಐಸಲೆ | ೧-೨೯, ೨-೧೫ | ಅಲ್ಲವೆ |
| ಐತರು | ೭-೩ | ಹತ್ತಿರಕ್ಕೆ ಬರು |
| ಐದೆ | ೧-೩೯ | ಚೆನ್ನಾಗಿ |

## ಒ

| | | |
|---|---|---|
| ಒಗೆ | ೧-೯, ೫-೧೦ | ಹುಟ್ಟು, ಉಂಟಾಗು |
| ಒಡಬಡು | ೩-೨೦ | ಸಮ್ಮತಿಸು, ಒಪ್ಪು |
| ಒಡರಿಸು | ೩-೧೫, ೫-೬ | ಉಂಟಾಗು, ಉಂಟುಮಾಡು |
| | ೬-೪೮ | ಮಾಡಿಸು |
| ಒತ್ತು | ೧-೨೮, ೪-೮ | ಹತ್ತಿರ, ನಿಕಟ |
| ಒದವಿಪುದು | ೩-೧೧ | ಒದಗಿಸುವುದು |
| ಒಪ್ಪ | ೭-೧೬, ೮-೩೭ | ಚೆಲುವು, ಮೆರುಗು |
| ಒಯ್ಯನೆ | ೩-೧೬, ೮-೩೬ | ಮೆಲ್ಲಗೆ, ಮೃದುವಾಗಿ |
| ಒರಲು | ೭-೨೫ | ನರಳು, ಸಂಕಟಪಡು |
| ಒರೆ | ೭-೨೩ | ಹೇಳು |

| | | |
|---|---|---|
| ಒಲವು | ೩-೨೦ | ಪ್ರೀತಿ |
| ಒಲುಮೆ | ೬-೨೦ | ಪ್ರೇಮ |
| ಒಲೆ | ೮-೩೭ | ಬಾಗು, ಬಳುಕು |
| ಒಸೆ | ೪-೨೬, ೫-೧೦ | ಪ್ರೀತಿಸು, ಪ್ರಸನ್ನವಾಗು |
| ಒಳವು | ೨-೨೨ | ಉಂಟು |

## ಓ

| | | |
|---|---|---|
| ಓಪ | ೩-೪೮ | ಪ್ರೀತಿಸು |
| ಓರಗೆ | ೭-೭ | ಪ್ರಿಯ, ಪತಿ, ಗಂಡ |
| ಓರಂತೆ | ೪-೨೩ | ಸಮಾನ, ಒಂದೇ ವಯಸ್ಸಿನ |
| ಓವು | ೧-೩೦, ೫-೪೫ | ಚೆನ್ನಾಗಿ |
| ಓಸರಿಸು | ೩-೨೧ | ಹಿಮ್ಮೆಟ್ಟು, ಪಕ್ಕಕ್ಕೆ ಸರಿ |

## ಕ

| | | |
|---|---|---|
| ಕಕ್ಕಸ | ೨-೨೮, ೪೦೨೯ | ಕರ್ಕಶ, ಶ್ರಮ,ದುಷ್ಟತನ |
| ಕಜ್ಜ | ೮-೩೫ | ಕಾರ್ಯ |
| ಕಟ್ಟಾಣಿ | ೧-೨೭ | ಚಿನ್ನದ ಮಣಿಗಳಿಂದ ಮಾಡಿದ ಸರ |
| ಕಡಲು | ೬-೨ | ಸಮುದ್ರ |
| ಕಡೆಗಣಿಸು | ೫-೨, ೬-೯ | ಅಲಕ್ಷ್ಯಮಾಡು |
| ಕದುಬು | ೧-೨೫,೩-೧೧<br>೭-೩೨ | ಇತ್ಸಹ, ಚಿಂತೆ, ಆಗ್ರಹ |
| ಕನಲು | ೩-೧೮, ೬-೪೦ | ಸಿಟ್ಟಾಗು,ಕೋಪಿಸು |
| ಕಬ್ಬ | ೧-೨೯ | ಕಾವ್ಯ |
| ಕರಣ | ೬-೩೬, ೭-೧೬<br>೮-೨೩ | ಇಂದ್ರಿಯ |
| ಕರೆಗಣ್ಮು | ೭-೨ | ದಡವನ್ನು ತೊಳೆ |
| ಕಲ್ಪ | ೭-೨೭, ೮-೪೦ | ಬಹುಕಾಲ, ಸಾವಿರ ಯುಗಗಳಷ್ಟು ಅವಧಿ |
| ಕಲೆ | ೮-೪೦ | ನಿಮಿಷ |
| ಕವಿ | ೧-೨೧, ೭-೪೩ | ಮುಸುಕು, ದಡ್ಡವಾಗು |
| ಕವೆಕೋಡು | ೩-೨೩ | ಮೋಸ, ತಟವಟ |
| ಕಾತರಿಸು | ೭-೨೪ | ತಹತಹಪಡು, ಕಳವಳಿಸು |
| ಕಾಪು | ೭-೩೨ | ಕಾವಲು, ರಕ್ಷಣೆ |
| ಕಾಯ | ೪-೩೦, ೭-೧೧ | ಒಡಲು, ಶರೀರ |
| ಕಾಳಾಂಜಿ | ೧-೧೬ | ಉಗಿಯುವ ಪಾತ್ರೆ |

| | | |
|---|---|---|
| ಕಿಟ್ಟು | ೫-೨೩ | ಸೋಂಕು, ಸ್ಪರ್ಶಿಸು |
| ಕಿಲುಬು | ೮-೨೪ | ಕಪ್ಪು, ಕಲಂಕ, ಕರೆ |
| ಕುಂಚ | ೧-೧೬ | ಚಾಮರ |
| ಕುತ್ತ | ೪-೨೧ | ತಪ್ಪು, ದೋಷ, ಸಂಕಟ, ರೋಗ |
| ಕುರುಪು | ೫-೪೮, ೮-೪೪ | ಗುರುತು, ನೆನಪು |
| ಕುಲಪಾಲಿಕೆ | ೨-೨೬, ೮-೨೫ | ಪತಿವ್ರತೆ |
| ಕೂರ್ತು | ೨-೩೪ | ಇಷ್ಟಪಟ್ಟು |
| ಕೂರ್ಮೆ | ೩-೩೮, ೫-೪೯ | ಪ್ರೇಮ, ವಾತ್ಸಲ್ಯ |
| ಕೃಚ್ಛ್ರ | ೨-೧೩ | ಕಷ್ಟಸಾಧ್ಯವಾದ, ಕಠಿಣ |
| ಕೆಳದಿ | ೭-೭, ೮-೪೫ | ಸಖಿ, ಸ್ನೇಹಿತೆ, ಜತೆಗಾತಿ |
| ಕೇಣ | ೪-೪೨, ೭-೨೦ | ಮತ್ಸರ, ಅಸಹನೆ |
| ಕೇಳಿ | ೩-೪೮ | ಆಟ |
| ಕೈಗಡೆ | ೪-೨೪ | ವಶ, ಅಧೀನ |
| ಕೊಂಕು | ೬-೧೮ | ವಕ್ರ, ಡೊಂಕು |
| ಕೊನಬು | ೩-೩೮ | ಕೋಪ, ಮುನಿಸು |
| ಕೊನರು, ಕೊನರಿಸು | ೨-೩೩, ೩-೨೩ | ಚಿಗುರು, ಹೆಚ್ಚುಮಾಡು |
| ಕೋಟಲೆ | ೬-೧೨ | ತೊಂದರೆ |
| ಕೋವಿದ | ೪-೪೧, ೫-೧೧ | ಕುಶಲ, ನಿಪುಣ |
| ಗಂಪು | ೧-೨೬ | ಪರಿಮಳ, ಸುವಾಸನೆ |

## ಖ

| | | |
|---|---|---|
| ಖತಿ | ೨-೪೪, ೩-೨೮ | ರೋಷ, ಆಕ್ರೋಶ |

## ಗ

| | | |
|---|---|---|
| ಗಡಣ | ೫-೨, ೭-೧೯ | ಸಮೂಹ |
| ಗನ್ನಗದುಕ | ೩-೨೨ | ಮರೆಮೋಸ |
| ಗರತಿ | ೩-೩೩, ೪-೩೬, ೭-೯ | ಗೃಹಸ್ತ್ರೀ, ಪತಿವ್ರತೆ |
| ಗಲಗು | ೩-೨೮, ೬-೨೩ | ಗದ್ದಲ, ಗಲಾಟೆ |
| ಗಳಪು | ೨-೩೯ | ಹರಟು |
| ಗಾಡಿ | ೬-೨೧ | ಚೆಲುವು, ಸೊಬಗು |
| ಗಾಂಪ | ೫-೧೮ | ದಡ್ಡ |
| ಗಾರುವಡು | ೩-೨೩ | ಬಿರುಸಾಗು, ಕಠಿಣವಾಗು |
| ಗಾವಿಲ | ೫-೭ | ಗ್ರಾಮೀಣ, ಮೂಢ |
| ಗಾವುದ | ೧-೬, ೯-೧೯ | ಹರಿದಾರಿ (೩ ಮೈಲಿ) |

| | | |
|---|---|---|
| ಗ್ರಾಸ | ೩-೨೧ | ತುತ್ತು, ಆಹಾರ |
| ಗಾಳು | ೩-೨೧ | ತುತ್ತು, ಆಹಾರ |
| ಗಾಳು | ೩-೨೧ | ಕೀಳು, ದುಷ್ಟ |
| ಗೀಷ್ಪತಿ | ೨-೪೫ | ಬೃಹಸ್ಪತಿ |
| ಗುಣಕರುಗೊಳ್ | ೬-೪೯, ೭-೧ | ಇಷ್ಟವಾಗು, ಪ್ರೀತಿಪಡು |
| ಗೈಮೆ | ೧-೩೪,೬-೨೫ | ಕೆಲಸ, ದುಡಿಮೆ |
| ಗೈಸು | ೫-೩೪ | ಮಾಡಿಸು |

## ಘ

| | | |
|---|---|---|
| ಘರಿಕ್ಕನೆ | ೬-೩೮ | ಸರ್ರನೆ, ತಟ್ಟನೆ |
| ಘಳಿಲನೆ | ೭-೪೫ | ಬೇಗನೆ |

## ಚ

| | | |
|---|---|---|
| ಚತುಷ್ಷಷ್ಟಿ | ೧-೧೮ | ಅರುವತ್ತುನಾಲ್ಕು |
| ಚರಾಚರ | ೮-೧ | ಜಂಗಮ ಸ್ಥಾವರ, ಚಲಿಸುವ, ನೆಲಸಿರುವ |
| ಚಲ್ಲ | ೬-೧೪ | ಸರಸ |
| ಚಾದಗೆ | ೬-೨೬ | ಚಾತಕ |
| ಚಾಂದ್ರಾಯಣ | ೨-೧೩ | ಒಂದು ವ್ರತ, ನೇಮ |
| ಚಾರಿವರೆ | ೩-೩೭ | ಸುತ್ತಾಟ |
| ಚುನ್ನ | ೪-೧೩, ೯-೭ | ಸುಳ್ಳು |
| ಚೆಂಬೊನ್ನ | ೧-೩೫ | ಚಿನ್ನ, ಬಂಗಾರ |
| ಚೊಲ್ಲೆಹ | ೭-೧೮ | ತುರುಬು |

## ಛ

| | | |
|---|---|---|
| ಛಲ | ೩-೩೭ | ಹಟ, ಮೊಂಡುತನ |

## ಜ

| | | |
|---|---|---|
| ಜಸ | ೩-೪೭, ೪-೫ | ಯಶರ್ |
| ಜಾನ | ೭-೪೯ | ಧ್ಯಾನ |
| ಜಾವ | ೭-೨೭ | ಯಾಮ ಮೂರುಗಂಟೆಗಳ ಕಾಲ |
| ಜೊನ್ನವಕ್ಕಿ | ೬-೨೫ | ಜ್ಯೋತ್ಸ್ನಾ ಪಕ್ಷಿ ; ಚಕೋರ |
| ಜೋಗಿ | ೭-೩೪ | ಯೋಗಿ |
| ಜವ್ವನ | ೬-೩, ೮-೩೫ | ಯೌವ್ವನ ; ಪ್ರಾಯ |
| ಜಂಪು | ೬-೮ | ಗುಂಪು, ಸಮುದಾಯ |

## ಠ

| | | |
|---|---|---|
| ಠಾವು | ೯-೨೦ | ಸ್ಥಾನ, ಎಡೆ, ತಾವು |

## ತ

| | | |
|---|---|---|
| ತಣಿ | ೫-೧೧, ೭-೪೮ | ತೃಪ್ತಿಹೊಂದು |
| ತನಿ | ೧-೪೩, ೭-೨೬ | ಹೆಚ್ಚಾದ |
| ತರಿಳ, ತರಿ ? | ೬-೨೮ | ತಳಲು, ಒರಡು, ಕಣ |
| ತರಿಸಲ್ | ೬-೨೬ | ನಿಶ್ಚಯಿಸು |
| ತವಕ | ೭-೨೧ | ಕುತೂಹಲ, ಆತುರ |
| ತವರು | ೫-೩೨ | ತಾಯಿಯ ಮನೆಯವರು |
| ತಳುವು | ೩-೧೫ | ತಡಮಾಡು |
| ತಳೆ | ೩-೪೬ | ತಾಳು |
| ತಾಪತ್ರಯ | ೯-೩೮ | ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಸಂಬಂಧವಾದ ತೊಂದರೆಗಳು |
| ತಾಳಿಗೆ | ೯-೨೫ | ಸಂ. ತಾಲುಕಾ ಚ ಗಂಟಲು |
| ತಿಲಕ | ೮-೧೦ | ಹಣೆಬೊಟ್ಟು, ಲಾಂಛನ |
| ತೀವು | ೮-೧೪ | ತುಂಬು |
| ತುಂಗ | ೨-೩೦ | ಶ್ರೇಷ್ಠ, ಎತ್ತರವಾದ |
| ತುಡುಕು | ೬-೩೮ | ಹಿಡಿ, ಮುಟ್ಟು |
| ತುರುಚನ ಗಿಡು | ೭-೨೬ | ದುಸ್ಪರ್ಶದ ಗಿಡ |
| ತುರು | ೮-೮, ೯-೨೩ | ಹಸು,ದನ |
| ತೆಂಕಣ | ೧-೭ | ದಕ್ಷಿಣದ |
| ತೆತ್ತಿಗ | ೪-೨೧ | ನೆಂಟ, ಆಪ್ತ |
| ತೆರ | ೪-೪೬ | ರೀತಿ, ಆಪ್ತ |
| ತೇಜಿ | ೨-೮ | ಕುದುರೆ |
| ತೋಟ | ೬-೭ | ಜಗಳ, ಕಲಹ |

## ದ

| | | |
|---|---|---|
| ದುಗುಲ | ೫-೨೦, ೬-೪೩ | ದುಕೂಲ ; ರೇಷ್ಮೆ ಬಟ್ಟೆ |
| ದ್ಯೂತ | ೩-೪೮ | ಜೂಜು |
| ದೆಸೆ | ೪-೩೦ | ಅವಸ್ಥೆ |
| ದೇಗುಲ | ೭-೬ | ದೇವಕುಲ ; ದೇವಸ್ಥಾನ, ಗುಡಿ |

| | | |
|---|---|---|
| ದೇಶಿಕ | ೮-೩೩ | ಸದ್ಗುರು |
| ದೇಸಿ | ೩-೧೭ | ಸೊಗಸು |
| ದೊರೆ | ೨-೨೪, ೩-೪೦ | ಸಮಾನ, ಶ್ರೇಷ್ಠ |

## ಧ

| | | |
|---|---|---|
| ಧಾಮ | ೧-೧ | ವಾಸಸ್ಥಳ |
| ಧುರ | ೧-೧೩ | ಯುದ್ಧ |

## ನ

| | | |
|---|---|---|
| ನಗ | ೩-೨ | ಪರ್ವತ, ಬೆಟ್ಟ |
| ನತಿ | ೮-೩೩ | ನಮಸ್ಕಾರ |
| ನಲವು | ೨-೩೭, ೪-೮ | ಸಂತೋಷ, ಪ್ರೀತಿ |
| ನಲ್ಲ | ೪-೪೭ | ಪ್ರಿಯ, ಒಳ್ಳೆಯವ |
| ನಳಿನ | ೭-೪೫ | ಕಮಲ |
| ನಿಗಮ | ೧೦೫೭ | ವೇದ |
| ನಿಟ್ಟಿಸು | ೬-೧೫, ೮-೩೭ | ನೋಡು |
| ನಿಧಿ | ೭-೪೧ | ದ್ರವ್ಯ, ಭಂಡಾರ |
| ನಿರವಿಸು | ೩-೩೩ | ನಿರೂಪಿಸು, ಹೇಳು |
| ನೀಕರಿಸು | ೪-೩೭, ೫-೩೧ | ತಾತ್ಸಾರಮಾಡು, ಧಿಕ್ಕರಿಸು |
| ನೀಟ | ೯-೧೯ | ಉದ್ದ, ಸಮನಾದ |
| ನೀತ | ೩-೨೯ | ವಿಹಿತ, ಯೋಗ್ಯ, ತಕ್ಕಂಥ |
| ನೆಗಳು | ೩-೧೦ | ಮಾಡು |
| ನೆರೆ | ೩-೪೦ | ಚೆನ್ನಾಗಿ, ಸರಿಯಾಗಿ |
| ನೆಲೆ | ೧-೬, ೩-೧೦, ೭-೮ | ಸ್ಥಳ, ಮನಸ್ಸಿನ ದಾರ್ಢ್ಯ |
| ನೇಮ | ೩-೨೯, ೭-೮, ೮-೨೩ | ವಿಧಿ, ನಿಷ್ಠೆ, ಕ್ರಮ, ಸಂಯಮ |
| ನೇಹ | ೮-೪೫ | ಸ್ನೇಹ ; ಗೆಳೆತನ, ಪ್ರೀತಿ |
| ನೋಂಪಿ : ನೋನ್ | ೭-೩೨ | ವ್ರತ ; ವ್ರತವನ್ನು ಕೈಕೊಳ್ಳು |

## ಪ

| | | |
|---|---|---|
| ಪಚನ | ೮-೨೬ | ಜೀರ್ಣ, ಬೇಯಿಸುವುದು |
| ಪಡಿ | ೧-೧೯, ೩-೬ | ಪ್ರತಿ ; ಸರಿಸಮ |
| ಪಡಿಗ | ೩-೩೨ | ಪ್ರತಿಗ್ರಾಹ |
| ಪಡಿಮೊಗ | ೭-೨೯ | ಪ್ರತಿಮುಖ ; ಎದುರು |
| ಪಡಿವಿಡಿ | ೬-೪೫ | ಅನುಸರಿಸು |

| | | |
|---|---|---|
| ಪಡಿಬರಿಸು | ೨-೪೮ | ಪ್ರತಿಭಟಿಸು |
| ಪಣ್ಣು | ೭-೪೮, ೯-೨೪ | ಮಾಡು |
| ಪತಿಕರಿಸು | ೮-೩೨ | ಉಪಚರಿಸು |
| ಪತ್ತುಗೆ | ೪-೨೧, ೫-೧೭ | ಹೊಂದಿಕೆ, ಸಂಬಂಧ |
| ಪದ್ಮಭವ | ೬-೯ | ತಾವರೆಯಲ್ಲಿ ಹುಟ್ಟಿದವನು, ಬ್ರಹ್ಮ |
| ಪದುಳ | ೫-೧೪, ೮-೪೩ | ಹದುಳ, ಕ್ಷೇಮ |
| ಪರ | ೬-೪ | ಸ್ವರ್ಗ, ಶ್ರೇಷ್ಠ |
| ಪರಕೆ | ೫-೨೫ | ಹರಕೆ, ಆಶೀರ್ವಾದ |
| ಪರಿ | ೨-೩೫, ೭-೪೮ | ಸುತ್ತು, ರೀತಿ, ಬಗೆ, ಕತ್ತರಿಸು, ಹರಿ |
| ಪರಿಕರ | ೩-೨೧ | ಪದಾರ್ಥ, ಸಲಕರಣೆ |
| ಪರಿಕಿಸು | ೫-೬ | ಪರೀಕ್ಷಿಸು |
| ಪರಿಜು | ೧-೧೮ | ವೇಷ, ಆಕಾರ, ರೂಪು |
| ಪರಿಣತಿ | ೭-೪೨ | ಸಿದ್ಧಿ, ನೈಪುಣ್ಯ, ಕೌಶಲ್ಯ |
| ಪರಿಭವ | ೬-೨೯ | ತಾತ್ಸಾರ, ಹೀನಾಯ |
| ಪರಿಸರ | ೨-೧೭ | ಸಮೀಪ, ಸುತ್ತುಮುತ್ತು |
| ಪವಣೆಗೆ | ೧೦೨೬ | ಹೊಂದಿಕೆ |
| ಪರ್ವ | ೫-೨೯ | ಹಬ್ಬ, ವಿಶೇಷ ದಿನ |
| ಪಸದನ | ೫-೧೪ | ಪ್ರಸಾಧನ ; ಅಲಂಕಾರ |
| ಪಸುಗೆ | ೫-೧೦ | ಪಾಲು, ಭಾಗ |
| ಪಳಿ | ೨-೯, ೫-೧೬ ೨-೩೩ | ನಿಂದೆ, ದೂರು |
| ಪಾಟಿ | ೨-೨೭ | ಸಮಾನ |
| ಪಾಡು | ೨-೨೨,೪-೧೩ | ಕಷ್ಟ, ತೊಂದರೆ |
| ಪಾರು | ೩-೨೫ | ನಿರೀಕ್ಷಿಸು |
| ಪಾರಣೆ | ೫-೨೯ | ಉಪವಾಸ ಮುಗಿಸುವ ದಿನ |
| ಪಾಸಟಿ | ೨-೨೩ | ಸಮಾನ, ಸದೃಶ |
| ಪಾಸು | ೭-೨೫ | ಹಾಸಿಗೆ |
| ಪಾಸಿಕೆ | ೯-೨೩ | ” |
| ಪಾವುಗೆ | ೩-೩೨, ೬-೧ | ಪಾದುಕೆ ; ಪಾದರಕ್ಷೆ |
| ಪುತ್ತಳಿ | ೧-೨೨ | ಬೊಂಬೆ |
| ಪುರುಡಿಸು | ೫-೨೩ | ಸ್ಪರ್ಧಿಸು |
| ಪುರುಳು | ೧೦೨೬, ೫-೧೧ | ದ್ರವ್ಯ, ಸಾರ, ಅರ್ಥ |
| ಪುಳಕ | ೨-೩೦ | ಶ್ರೇಷ್ಠ |
| ಪುಂಜ | ೧-೧೦ | ರಾಶಿ, ಗುಂಪು |
| ಪೆರ್ಚುಗೆ | ೬-೪೪ | ಹೆಚ್ಚಿಗೆ, ಆಧಿಕ್ಯ |

| | | |
|---|---|---|
| ಪೆರ್ಮೆ | ೫-೪೦, ೯-೫೪ | ದೊಡ್ಡತನ, ಹೆಗ್ಗಳಿಕೆ,ಹಿರಿಮೆ |
| ಪೆಂಪು | ೬-೧೭ | ಅತಿಶಯ |
| ಪೆರ | ೩-೨೭, ೫-೫ | ಹಿಂದೆ, ಇತರ |
| ಪೇಸು | ೪-೧೪ | ಹೇಸು, ಅಸಹ್ಯಪಡು |
| ಪೊಡಮಡು | ೪-೮ | ನಮಸ್ಕರಿಸು |
| ಪೊಡೆ | ೪-೫೦ | ಹೊಟ್ಟೆ |
| ಪೊಂಜಳೆ | ೬-೩೯ | ಪೊನ್+ಸಳೆ, ಚಿನ್ನದ ಬೆತ್ತ (=ತೆಳ್ಳಗಿರುವ, ಬಳುಕುವ) |
| ಪೊದ್ದು | ೧-೧೬ | ಪೊರ್ದು ; ಸಮೀಪಿಸು |
| ಪೊರು | ೬-೧೦ | ಹೊರು, ಧರಿಸು |
| ಪೊರೆ | ೫-೭ | ಕಾಪಾಡು |
| ಪೊಸತ್ತಿಲ್ | ೪-೪೩ | ಪೊಸಂತಿಲ್ ; ಹೊಸತಿಲು,ಹೊಸ್ತಿಲು |
| ಪ್ರಾಯಶ್ಚಿತ್ತ | ೭-೨೪ | ದೋಷಪರಿಹಾರಕ ವಿಧಿ |

## ಬ

| | | |
|---|---|---|
| ಬಗೆ | ೩-೧೭, ೬-೨೭ | ಮನಸ್ಸು, ರೀತಿ |
| ಬಟ್ಟೆ | ೯-೧೯ | ದಾರಿ |
| ಬಣ್ಣಗೆ | ೩-೧೭, ೬-೨೦ | ರಚನೆ |
| ಬನ್ನಣೆ [ಬಣ್ಣನೆ] | ೧-೧೭ | ವರ್ಣನೆ |
| ಬಲವರು | ೨-೧೦ | ಸುತ್ತು, ಪ್ರದಕ್ಷಿಣೆಮಾಡು |
| ಬಲವೈರಿ | ೧-೧೯ | ಇಂದ್ರ |
| ಬಸವಳಿ | ೭-೨೫ | ಶಕ್ತಿಗುಂದು |
| ಬಸುರು, ಬಸಿರು | ೧-೯, ೪-೨೫, ೫-೧೦ | ಹೊಟ್ಟೆ |
| ಬಿಂಕ | ೧-೧೬, ೨-೪೨, ೬-೧೮ | ಜಂಬ, ಗರ್ವ |
| ಬಿಜ್ಜಣಿಗೆ | ೧-೧೬, ೪೧೮ | ಬೀಸಣಿಗೆ |
| ಬಿಜ್ಜೆ | ೧-೨೯, ೩-೩೧ | ವಿದ್ಯೆ |
| ಬಿಡುಗಣ್ಣ | ೫-೨ | ದೇವತೆ |
| ಬಿತ್ತರ | ೨-೧೯, ೭-೩ | ವಿಸ್ತಾರ ; ಅಗಲ |
| ಬಿನದ | ೩-೩೮, ೬-೨೯ | ವಿನೋದ |
| ಬಿರುಬು | ೭-೨೬ | ಒರಟುತನ, ಕಾಠಿಣ್ಯ |
| ಬಿಳುವಕ್ಕಿ | ೨-೩೩ | ಪಾರಿವಾಳ |
| ಬೀಡು | ೧-೭ | ಇಳಿಯುವ ಸ್ಥಳ, ಮನೆ |
| ಬೀಯ | ೬-೪೨, ೭-೧೨ | ವ್ಯಯ |
| ಬೀಳು | ೫-೧೯ | ಹೀನ, ಅಯೋಗ್ಯ |

| | | |
|---|---|---|
| ಬೂತಾಟ | ೬-೭, ೮-೪೪ | ಬೂಟಾಟಿಕೆ, ಕಪಟ |
| ಬೆಕ್ಕಸ | ೭-೩೭ | ಸೋಜಿಗ, ಆಶ್ಚರ್ಯ |
| ಬೆಲೆಗೈ | ೫-೧೯ | ಮಾರು, ಮಾರಾಟ ಮಾಡು |
| ಬೆಸಗೊಳ್ | ೭-೩೪ | ಕೇಳು, ಪ್ರಶ್ನೆ ಮಾಡು |
| ಬೆಸನ | ೮-೪೧ | ವ್ಯಸನ |
| ಬೆಳೆಗೈ | ೭-೪೪, ೯-೫೭ | ಗದ್ದೆ, ಹೊಲ |
| ಬೇನೆ | ೪-೧೪ | ವೇದನೆ, ವ್ಯಥೆ, ರೋಗ |
| ಬೊಬ್ಬಿರಿ | ೩-೨೫ | ಕೂಗಾಡು |
| ಬಂದಿಗೊಳ್ | ೩-೧೭ | ಸೆರೆಗೈ, ವಶಪಡಿಸಿಕೊ |

## ಭ

| | | |
|---|---|---|
| ಭವನ | ೨-೧೪ | ಮನೆ,ಮಹಲು |
| ಭಾವೆ | ೩-೪೪,೪-೩೩,೮-೩೬ | ಮಹಿಳೆ, ಚೆಲುವೆ |
| ಭಿನ್ನಗೈ | ೬-೪೬ | ಒಡೆ, ದೂರಮಾಡು |
| ಭೂರಿ | ೮-೨೩ | ಹೆಚ್ಚಾದ |
| ಭೂರುಹ | ೨-೩೩ | ಮರ |
| ಭೇದ | ೩-೩೩, ೫-೩೮ | ತಂತ್ರ, ವ್ಯತ್ಯಾಸ |
| ಭೋಂಕನೆ | ೬-೩೯ | ಬೇಗ |

## ಮ

| | | |
|---|---|---|
| ಮಡಮುರಿ | ೬-೩೮ | ಹಿಮ್ಮೆಟ್ಟು, ಹಿಂದೆಗೆ |
| ಮಣಿ | ೮-೯ | ತಲೆಬಾಗು, ವಿನಯತೋರು |
| ಮನದನ್ನ | ೨-೨೬,೫-೩೯,೭-೧೩ | ಮನಸ್ಸು ಒಪ್ಪಿರುವ ಪ್ರಿಯ, ಪತಿ |
| ಮನ್ನಣೆ | ೨-೧೧, ೫-೨೫ | ಗೌರವ, ಮರ್ಯಾದೆ |
| ಮಾನಿಸ | ೫-೨೮ | ಸಂ. ಮನುಷ್ಯ |
| ಮನೆವಾಳ್ತೆ | ೨-೨೫,೩-೨೦,೭-೧೨ | ಮನೆಗೆಲಸ |
| ಮಬ್ಬು | ೮-೪೮ | ಮರ್ವು, ಕತ್ತಲೆ, ಮಂಕು |
| ಮರ್ಮ | ೩-೧೯, ೮-೪೧ | ಸೂಕ್ಷ್ಮ, ಗುಟ್ಟು |
| ಮರವಡು | ೬-೩೧ | ನಿಶ್ಚೇಷ್ಟವಾಗು |
| ಮರುಕ | ೨-೩೧, ೪-೨೫ | ಕನಿಕರ, ದಯೆ |
| ಮರುಳು | ೧-೫೪,೨-೪೩,೭-೧೨ | ಹುಚ್ಚು, ದಡ್ಡ |
| ಮಸಳು | ೧-೫೨ | ಮಂಕಾಗು, ಕುಂದು |
| ಮಾಟ | ೬-೩೧ | ರೀತಿ, ತರ |
| ಮಾಡ | ೭-೮ | ಮನೆಯ ಮಹಡಿ |

| | | |
|---|---|---|
| ಮೀಹ | ೪-೨೪, ೮-೨೦ | ಸ್ನಾನ |
| ಮೀಸಲು | ೮-೧೬ | ಉಪಯೋಗಿಸದೆ ಇರುವ, ಪವಿತ್ರವಾದ |
| ಮುಡಿ | ೧-೪೪, ೨-೭, ೩-೩೪, ೮-೫ | ತಲೆ, ಶಿರಸ್ಸು, ತಲೆಗೂದಲು |
| ಮುಪ್ಪುರ | ೨-೪೮ | ಮೂರು ಪಟ್ಟಣಗಳು |
| ಮೂದಲಿಸು | ೪-೩೨ | ಹೀಯಾಳಿಸು, ಜರೆದಾಡು |
| ಮೇಳ | ೩-೪೩ | ಜತೆ, ಸಹವಾಸ |
| ಮೊನೆ | ೫-೩೩, ೩೮ | ಜಗಳ |
| ಮೊಳೆ | ೬-೩೫, ೮-೧೫ | ಮೊಳಕೆ, ಅಂಕುರ |
| ಮೋಡಿ | ೪-೧೧,೫-೩೩,೬-೧೩ | ಬಿಗುಮಾನ, ಗರ್ವ |
| ಮಂದಿ | ೫-೩೯ | ಬಹಿರಂಗ, ಗುಂಪು |
| ಮಂದಿವಾಳ | ೫-೩೧ | ಅತಿಸಲುಗೆ,ಅಲಕ್ಷ್ಯ |

## ಯ

| | | |
|---|---|---|
| ಯತಿ | ೨-೪೫, ೮-೩೨ | ಸಂನ್ಯಾಸಿ, ಸಾಧು |
| ಯುಗ | ೭-೨೭ | ಸೃಷ್ಟಿಯ ಕಾಲಮಾನ |

## ರ

| | | |
|---|---|---|
| ರಯ್ಯ | ೮-೨೬ | ಸುಂದರ, ಮನೋಹರ |
| ರಾಗ | ೭-೪೦ | ಪ್ರೀತಿ |

## ಲ

| | | |
|---|---|---|
| ಲಹರಿ | ೭-೪೦ | ಅಲೆ, ತರಂಗ |
| ಲಾವಣ್ಯ | ೮-೩೬ | ಸತ್ವ, ಹೊಳಹು |
| ಲೋಗರು | ೪-೧೧ | ಜನರು |
| ಲಂಬಣ | ೧-೪೨ | ಹಾರ, ಸರ,ಮಾಲೆ |

## ವ

| | | |
|---|---|---|
| ವಂದಾರು | ೭-೧ | ಹೊಗಳುವವರು, ಭಕ್ತರು |
| ವಸನ | ೩-೨೧ | ಬಟ್ಟೆ, ಉಡಿಗೆ |
| ವಾಂಛಿತ | ೬-೧ | ಬೇಕಾದ, ಇಷ್ಟವಾದ |
| ವಾರ್ಧಿ | ೧-೮ | ಸಮುದ್ರ |
| ವಿಜ್ಞಾನ | ೯-೧ | ತಿಳಿವಳಿಕೆ |
| ವಿದಿತ | ೨-೧೫ | ತಿಳಿದದ್ದು |

| | | |
|---|---|---|
| ವೃತ್ತ | ೪-೩ | ಸಂಗತಿ, ಸಮಾಚಾರ |
| ವೇಲೆ | ೭-೪ | ಸಮುದ್ರದ ಅಲೆ |
| ವೇದನೆ | ೭-೨೪ | ಸಂಕಟ, ಕಳವಳ |
| ವ್ಯಂಗ್ಯ | ೬-೨೨ | ಅಣಕವುಳ್ಳ, ಸೂಚಕ |
| ವೈಜಯಂತಿ | ೧-೨ | ಬಾವುಟ, ಪತಾಕೆ, ಹಾರ |

## ಶ

| | | |
|---|---|---|
| ಶಾಕ | ೮-೧೭ | ಕಾಯಿಪಲ್ಯ |
| ಶೌರಿ | ೬-೨ | ವಿಷ್ಣು |
| ಸರ್ಗ | ೯-೪೨ | ಅಧ್ಯಾಯ, ಪ್ರಕರಣ |
| ಸಜ್ಜುವಡು | ೮-೩೬ | ಸಿದ್ಧವಾಗು, ಗೋಚರಿಸು |
| ಸದ್ಮ | ೮-೨ | ಮನೆ |
| ಸದೆದಟ್ಟು | ೧-೩೬ | ಹೊಡೆದೋಡಿಸು |
| ಸನ್ನಾಹ | ೧-೩೬ | ಸಮೂಹ |
| ಸಮನಿಸು | ೪-೧೯ | ಮಾಡಿಸು, ಒದಗಿಸು |
| ಸವನಿಸು | ೭-೧೮ | " " |
| ಸರ್ವಂಸಹೆ | ೬-೧೦ | ಭೂಮಿ |
| ಸಾರು | ೭-೨೯ | ಹತ್ತಿರ ಬರು |
| ಸಿಡಿಮಿಡಿಗೊಳ್ಳು | ೪-೭ | ರೇಗು, ಸಿಟ್ಟಾಗು |
| ಸಿದ್ಧಿ | ೪-೪೮ | ಉಪದೇಶದ ಸಫಲತೆ |
| ಸುಯ್ | ೭-೨೫ | ಉಸಿರು, ಉಚ್ಛ್ವಾಸ |
| ಸುಯಿಧಾನ | ೮-೨೬ | ಜಾಗರೂಕತೆ |
| ಸೂಸು | ೪-೧೮ | ಚಿಮುಕಿಸುವುದು |
| ಸೆಜ್ಜೆ | ೭-೬ | ಹಾಸಿಗೆ |
| ಸೇಕ | ೨-೪೬ | ಚಿಮುಕಿಸು |
| ಸೈಪಿಡು | ೮-೫ | ಸರಿಪಡಿಸು |
| ಸೈಪು | ೭-೧೮ | ಪುಣ್ಯ |
| ಸೊಗ | ೧-೪೩ | ಸುಖ |
| ಸೊಗಸು | ೫-೧೫ | ಚಂದುಳ್ಳ, ಲಕ್ಷಣವಾದ |
| ಸೊಬಗು | " | " " |
| ಸೊದೆ | ೬-೨೫ | ಅಮೃತ |
| ಸೋಗೆ | ೩-೧೪, ೭-೪ | ನವಿಲು |
| ಸೌಸವ | ೭-೩೩ | ಸುಗಂಧ |
| ಸಂಗಾತಿ | ೭-೧೦ | ಜತೆಯವಳು |

| | | |
|---|---|---|
| ಸಂಚಿ | ೧-೩೬ | ಎಲೆ ಅಡಿಕೆಯ ಚೀಲ |
| ಸಂದಣಿಸು | ೭-೧೭ | ಒಟ್ಟುಗೂಡಿಸು, ಗುಂಪಾಗು |
| ಸಂದ | ೧-೫೦ | ಹೆಸರುವಾಸಿಯಾದ, ಪ್ರಸಿದ್ಧ |
| ಸಾಂಗ | ೨-೩೦ | ಚೆನ್ನಾಗಿ, ಸಂಪೂರ್ಣ |
| ಸಾಂತಪನ | ೨-೧೩ | ಉಗ್ರ ತಪಸ್ಸು |
| ಸಿಂಗರ | ೨-೧೩ | ಶೃಂಗಾರ |
| ಸೊಂಪು | ೬-೮ | ಅಂದ, ಒತ್ತು |

## ಹ

| | | |
|---|---|---|
| ಹದನು | ೧-೬೧ | ರೀತಿ, ಸಂಗತಿ |
| ಹದಿಬದೆ | ೨-೧೫, ೩-೪೮ | ಪತಿವ್ರತೆ ; ಸಾಧ್ವಿ |
| ಹ಼ದುಗು | ೬-೩೬ | ಗುಕ್ಕು, ಸಂಕುಚಿತವಾಗು |
| ಹನ್ನಸ | ೩-೨೨ | ಕಿರುಕುಳ ? |
| ಹಮ್ಮು | ೪-೧೫ | ಅಹಂಕಾರ, ಸೊಕ್ಕು |
| ಹಯನು | ೪-೪೫ | ಕರೆಯುವ ಹಸು |
| ಹೆಕ್ಕಳಿಸು | ೪-೧೫ | ಹೆಚ್ಚು |



ಪ್ರಿಯ ಕನ್ನಡ ಬಂಧುಗಳೆ,

೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ೯೬ನೇ ವರ್ಷದ ಹೊಸ್ತಿಲಲ್ಲಿದೆ. ಸ್ಥಾಪನೆಗೊಂಡಂದಿನಿಂದ ಇಂದಿನವರೆಗೂ ಕನ್ನಡ – ಕನ್ನಡಿಗ – ಕರ್ನಾಟಕದ ಒಳಿತಿಗೆ ಶ್ರಮಿಸುತ್ತಾ, ಕನ್ನಡಿಗರಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಎಚ್ಚರ ಮೂಡಿಸುವಲ್ಲಿ ಪರಿಷತ್ತಿನ ಪ್ರಕಟಣೆಗಳು ಮಹತ್ವದ ಪಾತ್ರ ವಹಿಸುತ್ತಾ ಬಂದಿವೆ. ನಮ್ಮ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ. ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ನನ್ನದು.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಹಾಗೂ ಹೊಸ ಪುಸ್ತಕಗಳನ್ನು ಬೆಂಗಳೂರಿನಲ್ಲಿ ನಡೆಯುತ್ತಿರುವ ೭೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ ಭರವಸೆ ನನಗಿದೆ.

ಡಾ. ನಲ್ಲೂರು ಪ್ರಸಾದ್ ಆರ್.ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ ಬೆಂಗಳೂರು-೫೬೦೦೧೮